# ಅರಸೀಕೆರೆ ಪರಿಸರದ ದೇವಾಲಯಗಳು

(೨೦೧೨-೧೩ನೇ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಪ್ರೌಢ ಪ್ರಬಂಧ)


ಸಂಶೋಧಕಿ

**ರಶ್ಮಿ ಎ.ಎಸ್**

Reg. No: KUAH/00518

ಮಾರ್ಗದರ್ಶಕ

**ಡಾ. ವಾಸುದೇವ ಬಡಿಗೇರ**

ಸಹ ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ





ಸಮಾಜ ವಿಜ್ಞಾನಗಳ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೧೨-೨೦೧೩

# ಅರಸೀಕೆರೆ ಪರಿಸರದ ದೇವಾಲಯಗಳು

(೨೦೧೨-೧೩ನೇ ಸಾಲಿನ ಎಂ.ಫಿಲ್. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪ್ರೌಢ ಪ್ರಬಂಧ)

ಸಂಶೋಧನೆ

**ರಶ್ಮಿ ಎ.ಎಸ್**

**Reg. No: KUAH/00518**

ಮಾರ್ಗದರ್ಶನ

**ಡಾ. ವಾಸುದೇವ ಬಡಿಗೇರ**

ಸಹ ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಸಮಾಜ ವಿಜ್ಞಾನಗಳ ನಿಕಾಯ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ ೫೮೩೨೭೬

೨೦೧೨-೨೦೧೩

# ಸಂಶೋಧಕರ ಪ್ರಮಾಣ ಪತ್ರ

**'ಅರಸೀಕೆರೆ ಪರಿಸರದ ದೇವಾಲಯಗಳು'** ಎಂಬ ಪ್ರೌಢ ಪ್ರಬಂಧವನ್ನು **ಡಾ. ವಾಸುದೇವ ಬಡಿಗೇರ** ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರೌಢಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಾಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 30/7/13

**ರಶ್ಮಿ ಎ.ಎಸ್.**

ಸಂಶೋಧಕಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

# ಮಾರ್ಗದರ್ಶಕರ ಪ್ರಮಾಣ ಪತ್ರ

'ಅರಸೀಕೆರೆ ಪರಿಸರದ ದೇವಾಲಯಗಳು' ಎಂಬ ಪ್ರೌಢ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ರಶ್ಮಿ ಎ.ಎಸ್. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ. ಪ್ರಸ್ತುತ ಪ್ರೌಢಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 30/7/13

**ಡಾ. ವಾಸುದೇವ ಬಡಿಗೇರ**

ಸಹಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೨೭೬

# ಪರಿವಿಡಿ

ಅಧ್ಯಾಯ-೧

# ಪ್ರಸ್ತಾವನೆ

೧.೧. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

೧.೨. ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವಿಧಾನ

# ಅಧ್ಯಾಯ–೧

# ಅರಸೀಕೆರೆ ಪರಿಸರದ ದೇವಾಲಯಗಳು

**ಪ್ರಸ್ತಾವನೆ**

ವಿಶಾಲವಾದ ಅರ್ಥದಲ್ಲಿ ಚರಿತ್ರೆಯು ಅಖಂಡವಾದುದು. ಇದು ಇಡೀ ಮಾನವ ಜನಾಂಗದ ಕಥೆ. ಚರಿತ್ರೆಯೆನ್ನುವುದು ಗತಕಾಲದ ಮಾನವನ ಸಂಸ್ಕೃತಿಯ ವಿಭಿನ್ನ ಹಂತಗಳನ್ನು ವ್ಯವಸ್ಥಿತವಾಗಿ ಕಟ್ಟಿಕೊಡುವ ಬಹುಮುಖ್ಯ ಶಾಸ್ತ್ರವಾಗಿದೆ. ಇತಿಹಾಸ ಕೇವಲ ಪಾಂಡಿತ್ಯಕ್ಕೆ ಸೀಮಿತವಾದ ವಿಷಯಗಳಲ್ಲಿ ಒಂದಾಗಿದೆ. ನಮ್ಮ ಚಿಂತನಾಮಾರ್ಗಗಳಲ್ಲಿ ಹಾಸುಹೊಕ್ಕಾಗಿದೆ. ಮಾನವನು ಭೂಮಿಯ ಮೇಲೆ ಕಾಣಿಸಿಕೊಂಡ ಬಳಿಕ ಪ್ರಾರಂಭದಲ್ಲಿ ಅಲೆಮಾರಿಯಾಗಿ ಬದುಕು ಸಾಗಿಸುತ್ತಿದ್ದ ಇವನ ಬುದ್ಧಿ ವಿಕಾಸವಾದಂತೆಲ್ಲಾ ಒಂದೆಡೆ ನೆಲೆನಿಂತು ನಾಗರೀಕ ಜೀವನ ಪ್ರಾರಂಭಿಸಿದ. ಅಲೆಮಾರಿಯಾಗಿದ್ದಾಗ ಅಲ್ಲಲ್ಲಿ ಸಿಗುತ್ತಿದ್ದ ಹಸಿಮಾಂಸದ ಆಹಾರ, ಗೆಡ್ಡೆಗೆಣಸು ತಿಂದು ಜೀವನ ಸಾಗಿಸುತ್ತಿದ್ದ. ಒಂದೆಡೆ ನೆಲೆನಿಂತಾಗ ಬದುಕನ್ನು ಪ್ರಾರಂಭಿಸಿದಾಗ ತನಗೆ ಬೇಕಾದ ಆಹಾರ ಪದಾರ್ಥಗಳನ್ನು ತಾನೇ ಬೆಳೆದು ತಿನ್ನಲು ಪ್ರಾರಂಭಿಸಿದ. ಹೀಗೆ ಮಾನವ ವಿಕಾಸ ಹೊಂದಿದಂತೆಲ್ಲಾ ತನ್ನ ಪರಿಸರಕ್ಕೆ ಹಲವು ಸಾಂಸ್ಕೃತಿಕ ಕೊಡುಗೆಗಳನ್ನು ನೀಡಿದನು. ಮಾನವನ ಬದುಕಿನ ಅವಶೇಷಗಳು ಸ್ಮಾರಕಗಳು ಹಾಗೂ ಉಪಯೋಗಿಸಿದ ಹಲವು ವಸ್ತು ವಿಶೇಷತೆಗಳು ಅವನ ಕಾಲದ ಚರಿತ್ರೆ ಹಾಗೂ ಸಂಸ್ಕೃತಿಯನ್ನು ಕಟ್ಟುವ ಬಹುಮುಖ್ಯ ಆಕರ ಸಂಪತ್ತಾಗಿರುತ್ತವೆ.

ಚರಿತ್ರೆಯ ರಚನೆಗೆ ಆಕರಗಳು ಬಹಳ ಮುಖ್ಯ. ಆಕರಗಳಿಲ್ಲದೆ ಚರಿತ್ರೆ ಇಲ್ಲ. ಹಾಗಾಗಿ ಒಂದು ಪ್ರದೇಶದ ಚರಿತ್ರೆಯ ರಚನೆಗೆ ದೇವಾಲಯಗಳು ಅತ್ಯಂತ ಪ್ರಮುಖವಾದ ಆಕರಗಳಾಗಿದ್ದು ಮಹತ್ವದ ವಿಶ್ಲೇಷಣೆಗೆ ಒಳಪಡುತ್ತದೆ. "ಆಡು ಮುಟ್ಟದ ಸೊಪ್ಪಿಲ್ಲ, ಸರ್ವಜ್ಞ ಹೇಳಿದ ಮಾತಿಲ್ಲ" ಎಂಬ ನಾಣ್ಣುಡಿಯಂತೆ ದೇವಾಲಯಗಳಿಲ್ಲದ ಊರಿಲ್ಲ. ಎಂದರೆ ಅತಿಶಯೋಕ್ತಿಯೆನಿಸಲಾರದು. ಮಾನವ ತನ್ನ ಬದುಕಿನ ವಿವಿಧ ಆಯಾಮಗಳಲ್ಲಿ ಪ್ರಕೃತಿಯಲ್ಲಿನ ಅಗೋಚರ ಶಕ್ತಿಗೆ ದೈವೀ ಸ್ವರೂಪ ನೀಡಿ ಅದು ಜೀವನದ ಒಂದು ಅವಿಭಾಜ್ಯ ಅಂಗವೆಂದು ಸ್ವೀಕರಿಸಿದ ತರುವಾಯ ಅದರ ರಕ್ಷಣೆಗಾಗಿ ನಿರ್ಮಿಸಿದ ಕಟ್ಟಡವೇ ದೇವಾಲಯ ವಾಸ್ತುವಾಯಿತು. ಪ್ರಾರಂಭದಲ್ಲಿ ಚಿಕ್ಕ ವಾಸ್ತುವಿನ್ಯಾಸ ಪಡೆದ ದೇವಾಲಯಗಳು ಮಧ್ಯಕಾಲದ ವೇಳೆಗೆ ಬೃಹದಾಕಾರದ ಸ್ವರೂಪ ಪಡೆದವು. ಇವು ಪೂಜಾ ಕೇಂದ್ರಗಳಾಗಿ ಮಾತ್ರವಲ್ಲದೇ ಹಲವು ಚಟುವಟಿಕೆಗಳ ತಾಣಗಳಾಗಿ ಬೆಳೆದವು. ಇದಕ್ಕೆ ಮುಖ್ಯ ಕಾರಣ ಅವುಗಳಿಗೆ ದೊರೆತ ನಿರಂತರ ಆಶ್ರಯ ಪಾಲನೆ ಮತ್ತು ಪೋಷಣೆ. ಇವು ಅರಸರು, ಮಹಾಮಂಡಲೇಶ್ವರರು, ದಂಡನಾಯಕರು, ಶ್ರೀಮಂತರು, ವ್ಯಾಪಾರಿಗಳು ಹಾಗೂ ಜನತೆಯಿಂದ ದಾನದತ್ತಿಗಳ ರೂಪದಲ್ಲಿ ಹರಿದು ಬರತೊಡಗಿದವು. ಇದರ ಪ್ರತಿಫಲವಾಗಿ ದೇವಾಲಯಗಳು ಶೈಕ್ಷಣಿಕ, ವಾಣಿಜ್ಯ, ನ್ಯಾಯವಿತರಣೆ, ಮನರಂಜನೆ,

ಕೇಂದ್ರಗಳಲ್ಲದೆ, ಮತಪಂಥಗಳ ಕೇಂದ್ರಬಿಂದುವಾಗಿ 'ದೇವಾಲಯ ಸಂಸ್ಕೃತಿ' ಬೆಳವಣಿಗೆ ಹೊಂದಿತು. ಸಮಾಜದ ಕೇಂದ್ರಬಿಂದುಗಳಾಗಿದ್ದ ದೇವಾಲಯಗಳ ಅಂಗಸಂಸ್ಥೆಗಳಾಗಿ ಕ್ರಿ.ಶ. ೮ನೇ ಶತಮಾನದ ವೇಳೆಗಾಗಲೇ ವಿಭಿನ್ನ ಮತಪಂಥಗಳು, ಮಠಗಳೂ ಅಸ್ತಿತ್ವಕ್ಕೆ ಬಂದವು. ಸಮಾಜದಲ್ಲಿ ಹುಟ್ಟಿಕೊಂಡ ವಿವಿಧ ಅಧಿಕಾರ ಬಿಂದುಗಳ ಮಧ್ಯೆ ಪೈಪೋಟಿ ಹಾಗೂ ಹೊಂದಾಣಿಕೆಯಲ್ಲಿ ಮತಪಂಥಗಳೂ ಕೂಡ ಅಧಿಕಾರ ಬಿಂದುಗಳಾದವು. ರಾಜರು ಹಾಗೂ ಆಳರಸರ ವಂಶಗಳು ಎಷ್ಟೇ ಭೌತಿಕವಾದ ಅಧಿಕಾರವನ್ನು ಹೊಂದಿದ್ದರೂ ಸಹ ಒಂದು ದೈವೀ ಆಳ್ವಿಕೆಗೆ ಮತ್ತು ಅದನ್ನು ಪ್ರತಿನಿಧಿಸುವ ವ್ಯಕ್ತಿ, ಸಂಸ್ಥೆ ಮತ್ತು ಸಂಪ್ರದಾಯಗಳಿಗೆ ಈ ನಿಟ್ಟಿನಲ್ಲೂ ಶರಣಾಗಿದ್ದರು. ಇದರ ಪರಿಣಾಮವಾಗಿ ಮಧ್ಯಕಾಲದಲ್ಲಿ ರಾಜಪ್ರಭುತ್ವದಷ್ಟೇ ಪ್ರಮುಖ ಸ್ಥಾನವನ್ನು ದೇವಾಲಯಗಳು ಪಡೆದಿದ್ದವು.

ಕಲೆ ಮತ್ತು ವಾಸ್ತುಶಿಲ್ಪದ ಹಿನ್ನೆಲೆಯಿಂದ ಕರ್ನಾಟಕದ ಚರಿತ್ರೆಯನ್ನು ನೋಡಿದಾಗ ಅಸಂಖ್ಯಾತ ದೇವಾಲಯಗಳು ಕಂಡುಬರುತ್ತವೆ. ಶೈವ, ವೈಷ್ಣವ ದೇವಾಲಯಗಳು ಹೆಚ್ಚಿನ ಪ್ರಮಾಣದಲ್ಲಿ ನಿರ್ಮಾಣಗೊಂಡವು. ಬೌದ್ಧ ಮತ್ತು ಜೈನ ಧರ್ಮಗಳು ಈ ನಿರ್ಮಾಣ ಕಾರ್ಯದಲ್ಲಿ ಹಿಂದೆ ಬಿದ್ದಿರಲಿಲ್ಲ. ಅಂದು ವಾಸ್ತುಶಿಲ್ಪವೆಂದರೆ ಅದು ದೇವಾಲಯಗಳ ನಿರ್ಮಾಣ ಎಂಬ ಅರ್ಥವನ್ನು ಪಡೆದುಕೊಂಡಿತು. ಒಟ್ಟಾರೆಯಾಗಿ ಸ್ಥಳೀಯ ಚರಿತ್ರೆಯ ರಚನೆಯಲ್ಲಿ ಅಲ್ಲಿನ ಸ್ಮಾರಕಗಳು ಅದರಲ್ಲೂ ಅಸಂಖ್ಯಾತ ದೇವಾಲಯಗಳು ಬಹುಮುಖ್ಯವಾಗಿದೆ ಎಂದು ಹೇಳಬಹುದು.

ಪ್ರಸ್ತುತ **ಅರಸೀಕೆರೆ ಪರಿಸರದ ದೇವಾಲಯಗಳು** ಎಂಬ ಶೀರ್ಷಿಕೆಯ ಅಡಿಯಲ್ಲಿ ಅಧ್ಯಯನ ಕೈಗೊಂಡು ಅರಸೀಕೆರೆ ಪರಿಸರದ ಪ್ರಾಚೀನ ದೇವಾಲಯಗಳನ್ನು ಕುರಿತು ಶಾಸ್ತ್ರೀಯವಾಗಿ ಮತ್ತು ವ್ಯವಸ್ಥಿತವಾಗಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

ಹಾಸನ ಜಿಲ್ಲೆಯಲ್ಲಿ ಒಟ್ಟು ಎಂಟು ತಾಲೂಕುಗಳಲ್ಲಿ ಅರಸೀಕೆರೆಯೂ ಒಂದಾಗಿದೆ. ಅರಸೀಕೆರೆ ಪ್ರಾಂತ್ಯದ ಭೌಗೋಳಿಕ ಲಕ್ಷಣ ವಿಶಿಷ್ಟವಾದುದು. ಇತ್ತ ಬಯಲು ಸೀಮೆಯು ಅಲ್ಲ, ಅತ್ತ ಮಲೆನಾಡು ಅಲ್ಲದ ಅರೆಮಲೆನಾಡು ಭಾಗವಾಗಿದ್ದು, ಜನಜೀವನಕ್ಕೆ ಅತ್ಯಂತ ಉಪಯುಕ್ತವಾಗಿದೆ. ಅರಸೀಕೆರೆಯು ಹಾಸನ ಜಿಲ್ಲಾ ಕೇಂದ್ರದಿಂದ ಉತ್ತರ ದಿಕ್ಕಿಗೆ ೪೩ ಕಿ.ಮೀ. ದೂರದಲ್ಲಿದೆ. ತಲಕಾಡಿನ ಗಂಗರಿಂದ ಹಿಡಿದು ಮೈಸೂರಿನ ಒಡೆಯರವರೆಗೆ ಹಲವು ಅರಸರ ಆಳ್ವಿಕೆಗೆ ಒಳಪಟ್ಟಿದೆ.[೧]

ಹೀಗೆ ವಿವಿಧ ರಾಜ ಸಂತತಿಗಳು ಆಳ್ವಿಕೆ ನಡೆಸಿರುವ ಕುರುಹುಗಳು ಗೋಚರಿಸುತ್ತವೆ.[೨] ಅದರಲ್ಲಿ ದೇವಾಲಯಗಳೂ ಒಂದು ಮಹತ್ವದ ಪಾತ್ರವಹಿಸುತ್ತವೆ.

**ಈವರೆಗಿನ ಅಧ್ಯಯನಗಳ ಸಮೀಕ್ಷೆ**

ದೇವಾಲಯಗಳು ಮತ್ತು ಅವುಗಳ ವಾಸ್ತು ವಿವರಗಳ ಕುರಿತು ಈವರೆಗೆ ಸಾಕಷ್ಟು ಅಧ್ಯಯನಗಳು ನಡೆದಿವೆ. ಪ್ರಸ್ತುತ "ಅರಸೀಕೆರೆ ಪರಿಸರದ ದೇವಾಲಯಗಳು" ಎಂಬ ಶೀರ್ಷಿಕೆಯನ್ನು

ಅನುಲಕ್ಷಿಸಿ ಹೇಳುವುದಾದರೆ ಈ ಪ್ರಾಂತ್ಯವು ಹೊಯ್ಸಳರ ಉದಯದೊಂದಿಗೆ ಪ್ರಾಮುಖ್ಯತೆಯನ್ನು ಪಡೆದುಕೊಂಡು ವೀರಬಲ್ಲಾಳನ ಕಾಲದಲ್ಲಿ ಪ್ರಮುಖ ಆಡಳಿತ ಕೇಂದ್ರವಾಗಿ ರಾಜಧಾನಿಯೆಂದು ಕರೆಸಿಕೊಂಡಿದೆಯಷ್ಟೇ ಅಲ್ಲದೆ ಪ್ರಮುಖ ವಾಣಿಜ್ಯ ಕೇಂದ್ರವಾಗಿ, ಶ್ರೀಮಂತ ವರ್ತಕ ಸಮೂಹವನ್ನು, ಕಲಾವಿದರನ್ನೂ, ಆಡಳಿತಗಾರರನ್ನು, ವಿದ್ವಾಂಸರನ್ನು ತನ್ನತ್ತ ಆಕರ್ಷಿಸತೊಡಗಿತು. ಹೊಯ್ಸಳರನ್ನು ಕುರಿತು ಹೆಚ್ಚು ಅಧ್ಯಯನಗಳು ನಡೆದಿದ್ದರೂ ದೇವಾಲಯಗಳು ಮತ್ತು ಅವುಗಳ ವಾಸ್ತುರಚನೆಯ ವಿವರಗಳನ್ನು ಕುರಿತು ಈವರೆಗಿನ ಅಧ್ಯಯನಗಳು ಬಿಡಿಲೇಖನಗಳ ರೂಪದಲ್ಲಿ ಹೊರಬಂದಿವೆಯಾದರೂ ವಿದ್ವಾಂಸರು ಅರಸೀಕೆರೆ ಪ್ರಾಂತ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿಲ್ಲ. ಕೆಲವೇ ಕೆಲವು ದೇವಾಲಯಗಳನ್ನು ಮಾತ್ರ ವಿವರಿಸಿದ್ದಾರೆ.

ಕೆ.ಎಂ. ಮಹಾದೇವಸ್ವಾಮಿಯವರು "ಹೊಯ್ಸಳ ಕಾಲದ ಮುಖ್ಯ ನಗರಕೇಂದ್ರಗಳು ಮತ್ತು ನಗರೀಕರಣ ಒಂದು ಅಧ್ಯಯನ" ಎಂಬ ಸಂಶೋಧನಾ ಪ್ರಬಂಧದಲ್ಲಿ ಆ ಕಾಲದ ಪ್ರಮುಖ ನಗರಗಳನ್ನು ಗುರುತಿಸಿ ಅವುಗಳ ಪ್ರಾಮುಖ್ಯತೆಯನ್ನು ಚರ್ಚಿಸಿದ್ದಾರೆ. ಆದರೆ ಹೊಯ್ಸಳರ ಕಾಲದ ಪ್ರಮುಖ ನಗರವಾಗಿದ್ದ ಅರಸೀಕೆರೆಯನ್ನು ಕೈಬಿಟ್ಟಿದ್ದಾರೆ.

ಡಾ. ಸಕಲೇಶ ಅವರು "ಹೊಯ್ಸಳೋದಯ ಸಂಶೋಧನ" ಎಂಬ ಗ್ರಂಥದಲ್ಲಿ ಹಾಸನ ಮತ್ತು ಚಿಕ್ಕಮಂಗಳೂರು ಜಿಲ್ಲೆಗಳ ೫-೧೧ನೇ ಶತಮಾನಗಳ ಹೊಯ್ಸಳ ಪೂರ್ವದ ಹಾಗೂ ಅವರ ಆರಂಭಕಾಲದ ಶಾಸನಗಳನ್ನು ಬಳಸಿಕೊಂಡು ಹೊಯ್ಸಳ ಹಾಗೂ ಪ್ರಾದೇಶಿಕವಾಗಿ ಆಳಿದ ಮನೆತನಗಳ ಉದಯ ಮತ್ತು ಬೆಳವಣಿಗೆಗಳನ್ನು ರಾಜಕೀಯ ಚರಿತ್ರೆಯನ್ನು ಪುನಾರಚಿಸುವ ಕಡೆಗೆ ಅವರ ಗಮನವಿದೆ ಹಾಗೂ ಅರಸೀಕೆರೆ ಪರಿಸರದ ದೇವಾಲಯಗಳು ಅವರ ಅಧ್ಯಯನ ವ್ಯಾಪ್ತಿಯಿಂದ ಹೊರಗೆ ಉಳಿದುಬಿಟ್ಟಿದೆ.

ಡಾ. ಕೆ. ವಸಂತಲಕ್ಷ್ಮಿಯವರು "ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು" ಎಂಬ ಸಂಶೋಧನಾ ಪ್ರಬಂಧದಲ್ಲಿ ಹಾಸನ ಜಿಲ್ಲೆಯ ಇತರೆ ಜೈನ ಬಸದಿಗಳೊಂದಿಗೆ ಅರಸೀಕೆರೆ ತಾಲೂಕಿನ ಹೊಯ್ಸಳರ ಕಾಲದ ಬಸದಿಗಳ ಬಗ್ಗೆ ಮಾತ್ರ ಚರ್ಚಿಸಿದ್ದಾರೆ.

ಡಾ. ಜಗದೀಶ್‌ರವರು ತಮ್ಮ "ಮೆಜರ್‌ಮೆಂಟ್ ಸಿಸ್ಟಮ್ ಇನ್ ಕರ್ನಾಟಕ" ಎಂಬ ಸಂಶೋಧನಾ ಪ್ರಬಂಧದಲ್ಲಿ ಈ ತಾಲೂಕಿನಲ್ಲಿ ಕಂಡುಬರುವ ಅಳತೆ ಮತ್ತು ತೂಕಗಳಿಗೆ ಸಂಬಂಧಿಸಿದ ಶಾಸನ ವಿವರಗಳನ್ನು ವಿಶ್ಲೇಷಿಸಿದ್ದಾರೆ.

ಡಾ. ಎಂ. ಚಿದಾನಂದಮೂರ್ತಿಯವರು "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ"ದಲ್ಲಿ ತಮ್ಮ ಸಂಶೋಧನೆಯ ಕಾಲಾವಧಿಯ ಒಳಗೆ ಬರುವ ಅರಸೀಕೆರೆ ಪರಿಸರದ ಕೆಲವು ಶಾಸನಗಳನ್ನು ಕುರಿತು ಚರ್ಚಿಸಿದ್ದಾರೆ.[೩]

ಡಾ. ದೇವರಕೊಂಡಾರೆಡ್ಡಿಯವರು "ತಲಕಾಡಿನ ಗಂಗರ ದೇವಾಲಯಗಳು" ಎಂಬ ಸಂಶೋಧನಾ ಪ್ರಬಂಧದಲ್ಲಿ ಅರಸೀಕೆರೆ ಪ್ರದೇಶದಲ್ಲಿನ ತಳಲೂರು, ಕೆಲ್ಲಂಗೆರೆ ಮಾಲೆಕಲ್ಲು ತಿರುಪತಿಗಳಲ್ಲಿ ಕಂಡುಬರುವ ಗಂಗರ ಕಾಲದ ದೇವಾಲಯ ಶಿಲ್ಪಗಳ ಬಗೆಗೆ ಚರ್ಚಿಸಿದ್ದಾರೆ.

ಡಾ. ಶ್ರೀಕಂಠಶಾಸ್ತ್ರೀಗಳು ತಮ್ಮ "ಹೊಯ್ಸಳ ವಾಸ್ತುಶಿಲ್ಪ" ಎಂಬ ಗ್ರಂಥದಲ್ಲಿ ಪ್ರಸ್ತುತ ಪ್ರದೇಶದ ಕೆಲವು ಹೊಯ್ಸಳ ದೇವಾಲಯಗಳನ್ನು ಪರಿಚಯಿಸಿದ್ದಾರೆ.

ಡಾ. ಡಿ.ವಿ. ಪರಮಶಿವಮೂರ್ತಿಯವರು "ಕನ್ನಡ ಶಾಸನ ಶಿಲ್ಪ" ಎಂಬ ಸಂಶೋಧನಾ ಗ್ರಂಥದಲ್ಲಿ ಹೊಯ್ಸಳರ ಸ್ಮಾರಕ ಶಿಲ್ಪಗಳ ವೈಶಿಷ್ಟ್ಯತೆಗಳ ಬಗೆಗೆ ಚರ್ಚಿಸಿದ್ದು ಈ ಪ್ರದೇಶದ ಹಲ್ಕೂರು, ಕಿತ್ತನಕೆರೆ, ಶಾನೆಗೆರೆಗಳ ವೀರಗಲ್ಲುಗಳನ್ನು ಮಾತ್ರ ವಿಶ್ಲೇಷಿಸಿದ್ದಾರೆ.[೪]

ಡಾ. ಶ್ರೀವತ್ಸ ಎಸ್. ವಟಿಯವರು ತಮ್ಮ ನಾಗಪುರಿ ವನಗರ್ಭದಲ್ಲಿ "ಐತಿಹಾಸಿಕ ಮತ್ತು ಪುರಾತತ್ವ ವೈಶಿಷ್ಟ್ಯಗಳು" ಎಂಬ ಲೇಖನದಲ್ಲಿ ನಾಗಪುರಿಯ ಶಿಲಾಯುಗದ ನೆಲೆಗಳ ಬಗ್ಗೆ ನಾಗರೀಕ ಇತಿಹಾಸ, ಪುರಾತತ್ವ ವೈಶಿಷ್ಟ್ಯಗಳು ಮತ್ತು ಅಲ್ಲಿನ ದೇವಾಲಯಗಳು, ಕಟ್ಟಡಗಳ ಬಗ್ಗೆ ವಿಶ್ಲೇಷಿಸಿದ್ದಾರೆ.

ಡಾ. ಹನುಮನಾಯಕ್ "ಅರಸೀಕೆರೆ ತಾಲ್ಲೂಕಿನ ಹೊಸ ವೀರಗಲ್ಲುಗಳು" ಎಂಬ ಲೇಖನದಲ್ಲಿ ಸಂಶೋಧನಾ ಕಾರ್ಯದಲ್ಲಿ ಸಿಕ್ಕಂತಹ ವೀರಗಲ್ಲುಗಳ ಬಗ್ಗೆ ವಿವರಣೆ ನೀಡಿದ್ದಾರೆ.

ಡಾ. ಕೆ. ವಸಂತ ಲಕ್ಷ್ಮಿಯವರು "ಕೆಲ್ಲಂಗೆರೆ ಲಕ್ಷ್ಮೀನಾರಾಯಣ ದೇವಾಲಯದ ಶಾಸನಗಳು"[೬] ಎಂಬ ಲೇಖನದಲ್ಲಿ ಶಾಸನಗಳು[೫] ಬಗ್ಗೆ ಮಾತ್ರ ತಿಳಿಸಿದ್ದಾರೆ. ದೇವಾಲಯದ ಬಗ್ಗೆ ಏನೂ ಹೇಳಿಲ್ಲ.

ಡಾ. ಬಿ. ಪಾಂಡುಕುಮಾರ್‌ರವರು "ಹಾರನಹಳ್ಳಿ ಲಕ್ಷ್ಮೀನರಸಿಂಹ ಮತ್ತು ಸೋಮೇಶ್ವರ ದೇವಾಲಯಗಳು ಒಂದು ತೌಲನಿಕ ಅಧ್ಯಯನ" ಎಂಬ ಲೇಖನದಲ್ಲಿ ಈ ಎರಡೂ ದೇವಾಲಯಗಳ ರಚನಾ ವ್ಯತ್ಯಾಸವನ್ನು ಚರ್ಚಿಸಿದ್ದಾರೆ.[೬]

ಡಾ. ಕೆ.ಎನ್. ಮೋಹನ್‌ರವರು "ಅರಸೀಕೆರೆಯ ಈಶ್ವರ ದೇವಾಲಯ" ಎಂಬ ಲೇಖನದಲ್ಲಿ ಹೊಯ್ಸಳರ ಕಾಲದ ದೇವಾಲಯಗಳ ಲಕ್ಷಣಗಳನ್ನು ಈ ದೇವಾಲಯದಲ್ಲಿ ಸಂಪೂರ್ಣವಾಗಿ ವಿವರಿಸಿದ್ದಾರೆ.

ಹಾರನಹಳ್ಳಿ ನಾಗೇಂದ್ರವರು ತಮ್ಮ "ಹಾರನಹಳ್ಳಿ ಐತಿಹ್ಯ ಮತ್ತು ಹೊಯ್ಸಳ ದೇವಾಲಯಗಳು" ಎಂಬ ಲೇಖನದಲ್ಲಿ ಊರಿನ ಐತಿಹ್ಯದ ಬಗ್ಗೆ ಚರ್ಚಿಸಿದ್ದಾರೆ. ಹಾಗೆ ಹೊಯ್ಸಳ ದೇವಾಲಯಗಳನ್ನು[೭] ಪರಿಚಯಿಸಿದ್ದಾರೆ.

ಡಾ. ಶ್ರೀನಿವಾಸ ಪಾಡಿಗಾರವರು "ಅರಸೀಕೆರೆಯ ಈಶ್ವರ ದೇವಾಲಯ ಮೂಲ ಪ್ರಾಸಾದ ಪ್ರಭೇದ ಪರಿಶೀಲನೆ" ಎಂಬ ಲೇಖನದಲ್ಲಿ ದೇವಾಲಯದ ರಚನೆಯ ಬಗ್ಗೆ ವಿವರಿಸಿದ್ದಾರೆ.[೮]

ಈ ಎಲ್ಲಾ ಗ್ರಂಥಗಳೂ ಆನುಷಂಗಿಕವಾಗಿ ನನ್ನ ಅಧ್ಯಯನ ವ್ಯಾಪ್ತಿಯಲ್ಲಿಯ ಕೆಲವು ವಿಚಾರಗಳ ಚರ್ಚೆಗೆ ಒಳಪಡುತ್ತವೆ. ಅಲ್ಲದೇ ನನ್ನ ಅಧ್ಯಯನಕ್ಕೆ ಅನುಗುಣವಾಗುವಂತಹ ಕೆಲವು ಬಿಡಿ ಲೇಖನಗಳು ಈ ಸಮಯದಲ್ಲಿ ಉಲ್ಲೇಖಾರ್ಹವಾಗಿವೆ. ಡಾ. ಹನುಮನಾಯಕ ಚಲುವನಹಳ್ಳಿ ಗವಿಮಠ ಒಂದು ಪ್ರಾಗೈತಿಹಾಸಿಕ ನೆಲೆ[೯] ಹಾಗೂ ಆರ್. ವೆಂಕಟೇಶ್‌ಮೂರ್ತಿರವರ "ಅರಸೀಕೆರೆ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು ಒಂದು ಶೋಧ"[೧೦] ಎಂಬ ಲೇಖನಗಳು ಈ ಪ್ರದೇಶದ ಪ್ರಾಗೈತಿಹಾಸಿಕ ನೆಲೆಗಳ ಮೇಲೆ ಬೆಳಕು ಚೆಲ್ಲುತ್ತದೆ. ಡಾ. ಎಸ್. ಶೆಟ್ಟರ್ ಅವರು "ಅರಸೀಕೆರೆ ಅಂಡರ್ ದಿ ಹೊಯ್ಸಳಾಸ್"[೧೧] ಎಂಬ ಲೇಖನದಲ್ಲಿ ಅರಸೀಕೆರೆ ಪಟ್ಟಣವು ಹೊಯ್ಸಳರ ಕಾಲದಲ್ಲಿ ಕಂಡ ಸಂಪತ್ತು ಸಮೃದ್ಧಿಯನ್ನು ಅಲ್ಲಿನ ಶಿವಾಲಯದ ವಾಸ್ತು ಸೌಂದರ್ಯವನ್ನು ವಿವರಿಸಿದ್ದಾರೆ.

ಇಷ್ಟೆಲ್ಲಾ ಪ್ರಯತ್ನಗಳು ನಡೆದಿದ್ದರೂ ಯಾವುವೂ ಈ ಪ್ರದೇಶದ ದೇವಾಲಯಗಳನ್ನು ಸಂಪೂರ್ಣವಾಗಿ ಅಧ್ಯಯನಕ್ಕೆ ಒಳಪಡಿಸದ ಕಾರಣ ಈ ಪರಿಸರದ ಸಮಗ್ರ ಚಿತ್ರಣವನ್ನು ಕಟ್ಟಿಕೊಡಲಾರವು. ಹಾಗಾಗಿ ಈ ಪ್ರದೇಶಕ್ಕೆ ಕೇಂದ್ರೀಕೃತವಾದ ಅಧ್ಯಯನವೊಂದರ ಅವಶ್ಯಕತೆಯಿದ್ದು, ಆ ಕೊರತೆಯನ್ನು ನೀಗಿಸುವ ಪ್ರಯತ್ನ ಇದಾಗಿದೆ.

## ಅಧ್ಯಯನದ ಉದ್ದೇಶ

ಪ್ರಸ್ತುತ ದಿನಗಳಲ್ಲಿ ಸಂಶೋಧನೆಗಳು ಹೊಸ ರೂಪ ತಾಳುತ್ತಿವೆ. ಈವರೆಗೂ ಕೇವಲ ರಾಜಕೀಯವಾಗಿ ಬಹುಮುಖ್ಯ ಮನೆತನಗಳ ಬಗ್ಗೆ ನಡೆಯುತ್ತಿದ್ದ ಸಂಶೋಧನೆಗಳು ಕೆಲವು ದಶಕಗಳಿಂದ ಸಾಂಸ್ಕೃತಿಕ, ಪ್ರಾದೇಶಿಕ ಮತ್ತು ಸ್ಥಳೀಯ ಸಂಶೋಧನೆಯತ್ತ ಸಾಗುತ್ತಿವೆ. ದೇವಾಲಯಗಳು ನಮ್ಮ ನಾಡಿನ ಸಾಂಸ್ಕೃತಿಕ ಪರಂಪರೆಯ ಕೇಂದ್ರಗಳಾಗಿದ್ದು ಜನಮನದಲ್ಲಿ ಅಚ್ಚಳಿಯದ ಸ್ಥಾನಮಾನ ಪಡೆದಿವೆ. ಪ್ರಸ್ತುತ ಅಧ್ಯಯನದ ಶೀರ್ಷಿಕೆಯು **ಅರಸೀಕೆರೆ ಪರಿಸರದ ದೇವಾಲಯಗಳು** ಎಂಬುದಾಗಿದ್ದು ಅರಸೀಕೆರೆಯು ಗಂಗರ ಕಾಲದಿಂದ ಮೈಸೂರು ಒಡೆಯರ ಕಾಲದ ಅವಧಿಯವರೆಗೆ ವಿವಿಧ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿರುವುದು ಶಾಸನಾಧಾರಗಳಿಂದ ದೃಢಪಟ್ಟಿದೆ.[೧೨] ಈ ಕಾಲಘಟ್ಟದಲ್ಲಿ ಅನೇಕ ದೇವಾಲಯಗಳು ನಿರ್ಮಾಣವಾಗಿವೆ. ಅವುಗಳಲ್ಲಿ ಅರಸೀಕೆರೆ ಪರಿಸರದ ವ್ಯಾಪ್ತಿಯಲ್ಲಿ ಬರುವ ಪ್ರಾಗೈತಿಹಾಸಿಕ ಕಾಲದ ಅವಶೇಷಗಳು, ಶಾಸನಗಳು, ಸ್ಮಾರಕಗಳು, ದೇವಾಲಯಗಳ ಕಲೆ, ವಾಸ್ತುಶಿಲ್ಪ, ಮೂರ್ತಿಶಿಲ್ಪಗಳು ನಾಶವಾಗುವ ಮುನ್ನವೇ ಇವುಗಳ ಸಮರ್ಪಕ ಅಸ್ತಿತ್ವದ ಅಧ್ಯಯನ ಮಾಡುವ ಸಲುವಾಗಿ "ಅರಸೀಕೆರೆ ಪರಿಸರದ ದೇವಾಲಯಗಳು" ಎಂಬ ವಿಷಯವನ್ನು ಆಯ್ಕೆ

ಮಾಡಿಕೊಳ್ಳಲಾಗಿದೆ. ಈ ನನ್ನ ಅಧ್ಯಯನ ವಿಷಯಕ್ಕೆ ಪೂರಕವಾಗಿ ಅರಸೀಕೆರೆ ಪರಿಸರ ಮತ್ತು ಸುತ್ತಮುತ್ತಲಿನ ಪ್ರದೇಶವನ್ನು ಆಯ್ದುಕೊಂಡು ಈ ಎಲ್ಲಾ ಸ್ಥಳಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ದೊರೆತ ಮಾಹಿತಿಯನ್ನು ಆಧರಿಸಿ ದೇವಾಲಯಗಳ ಬಗ್ಗೆ ಸಂಪೂರ್ಣ ವಿಷಯವನ್ನು ಕ್ರೋಢೀಕರಿಸಿ ವಿಶ್ಲೇಷಣೆಗೆ ಒಳಪಡಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ವ್ಯಾಪ್ತಿ

ಯಾವುದೇ ಒಂದು ಸಂಶೋಧನೆಗೆ ಒಂದು ಚೌಕಟ್ಟು ಬಹುಮುಖ್ಯ. ಇದು ಒಂದು ನಿರ್ದಿಷ್ಟ ಹಾಗೂ ಉದ್ದೇಶಪೂರಿತ ಸಂಶೋಧನೆಯ ಯಶಸ್ಸಿಗೆ ಅತ್ಯಗತ್ಯ ಈ ವ್ಯಾಪ್ತಿಯ ಕ್ರಮಬದ್ಧತೆಯಿಂದ ಪ್ರಸ್ತುತ ಅಧ್ಯಯನವು ಶೀರ್ಷಿಕೆಯನ್ವಯ ಅರಸೀಕೆರೆ ನಗರ ಪರಿಸರ ಮತ್ತು ಸುತ್ತಮುತ್ತಲಿನ ೧೫ ಕಿ.ಮೀ. ವ್ಯಾಪ್ತಿಗೆ ಸಿಮಿತಗೊಳಿಸಿ, ಗಂಗರಕಾಲದಿಂದ ಮೈಸೂರು ಒಡೆಯರ ಕಾಲದವರೆಗಿನ ಕಾಲಮಿತಿಯನ್ನು ಹಾಕಿಕೊಳ್ಳಲಾಗಿದೆ. ಈ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಹಲವು ದೇವಾಲಯಗಳಲ್ಲಿ ಪ್ರಮುಖ ದೇವಾಲಯಗಳನ್ನು ಕುರಿತು ಅಧ್ಯಯನ ನಡೆಸಲಾಗಿದೆ.

## ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವನ್ನು ಅಧ್ಯಯನದ ಅನುಕೂಲಕ್ಕಾಗಿ ಐದು ಅಧ್ಯಾಯಗಳಾಗಿ ವಿಂಗಡಿಸಲಾಗಿದೆ.

## ಅಧ್ಯಾಯ ಒಂದು

ಪ್ರಸ್ತುತ ಅಧ್ಯಯನ ವಿಷಯದ ಬಗ್ಗೆ ಅಧ್ಯಯನವನ್ನು ಕೈಗೊಂಡಿರುವ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ ತಿಳಿಸಲಾಗಿದ್ದು, ಜೊತೆಗೆ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ ಮತ್ತು ಸಂಶೋಧನಾ ವಿಧಾನವನ್ನು ವಿವರಿಸಲಾಗಿದೆ.

## ಅಧ್ಯಾಯ ಎರಡು

ಪ್ರಸ್ತುತ ಅಧ್ಯಯನದ ಭೌಗೋಳಿಕ ಹಿನ್ನೆಲೆ ಹಾಗೂ ಐತಿಹಾಸಿಕ ಹಿನ್ನೆಲೆ ವಿಷಯಗಳನ್ನು ಕುರಿತಾಗಿ ಅವಲೋಕಿಸಲಾಗಿದೆ.

## ಅಧ್ಯಾಯ ಮೂರು

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ದೇವಾಲಯಗಳ ಉಗಮ, ವಿಕಾಸ ಮತ್ತು ಲಕ್ಷಣಗಳ ವಿವರಣೆ ನೀಡಲಾಗಿದೆ.

**ಅಧ್ಯಾಯ ನಾಲ್ಕು**

ಅರಸೀಕೆರೆ ಪರಿಸರದ ದೇವಾಲಯಗಳ ಕ್ಷೇತ್ರಕಾರ್ಯ ಕೈಗೊಂಡು ಅವುಗಳ ರಚನಾವಿನ್ಯಾಸ, ವಾಸ್ತುಶೈಲಿ ವಿವರಿಸಲಾಗಿದೆ.

**ಅಧ್ಯಾಯ ಐದು**

ಕೊನೆಯ ಅಧ್ಯಾಯವು ಸಮಾರೋಪವಾಗಿದ್ದು, ಪ್ರಸ್ತುತ ಅಧ್ಯಯನದ ಸಮಗ್ರ ಮಾಹಿತಿಗಳನ್ನು ಕ್ರೂಢೀಕರಿಸಿ ಸಂಕ್ಷಿಪ್ತ ರೂಪದಲ್ಲಿ ಹೇಳುವ ಪ್ರಯತ್ನ ಮಾಡಲಾಗಿದೆ.

**ಅಧ್ಯಯನ ವಿಧಾನ**

ಪ್ರಸ್ತುತ ಅಧ್ಯಯನವು ಯಾವುದೇ ಅಡೆತಡೆಗಳಿಲ್ಲದೆ ಸುಸೂತ್ರವಾಗಿ ಮುನ್ನಡೆಯಲು ಕ್ರಮಬದ್ಧವಾದ ಅಧ್ಯಯನ ವಿಧಾನ ಮುಖ್ಯವಾಗಿದೆ. ಅರಸೀಕೆರೆ ಪರಿಸರದ ದೇವಾಲಯಗಳ ಕುರಿತು ಪ್ರಾಥಮಿಕ ಮಾಹಿತಿಯನ್ನು ಗ್ರಾಮವಾರು ಕ್ಷೇತ್ರಕಾರ್ಯ ಮಾಡುವುದರ ಮೂಲಕ ಸಂಗ್ರಹಿಸಲಾಯಿತು. ಅದೇ ಅವಧಿಯಲ್ಲಿ ಪ್ರತಿ ದೇವಾಲಯಗಳ ಕುರಿತು ಛಾಯಾಚಿತ್ರ ಮತ್ತು ತಲನಕ್ಷೆಯನ್ನು ರಚಿಸಿಕೊಳ್ಳಲಾಯಿತು ಪ್ರತಿಯೊಂದು ದೇವಾಲಯಗಳ ವಾಸ್ತುವಿವರ ಮತ್ತು ಮೂರ್ತಿಶಿಲ್ಪಗಳನ್ನು ಸವಿವರವಾಗಿ ಅಧ್ಯಯನ ಮಾಡಲಾಗಿದೆ. ಅಂತಿಮವಾಗಿ ಇದಕ್ಕೆ ಪೂರಕವಾಗಿ ಆನುಷಂಗಿಕ ಆಕರಗಳನ್ನು ಬಳಸಿಕೊಂಡು. ಈ ಎಲ್ಲಾ ಮಾಹಿತಿಗಳನ್ನು ಸಂಗ್ರಹಿಸಿ ವಿಶ್ಲೇಷಿಸಿ, ನಂತರ ಪ್ರೌಢ ಪ್ರಬಂಧವನ್ನು ರಚಿಸಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಅರಸಿಕೆರೆ ತಾಲೂಕು ಕಛೇರಿಯಿಂದ ಪಡೆದ ಮಾಹಿತಿ

೨. ಎಪಿಗ್ರಾಫಿಯ ಕರ್ನಾಟಿಕ ಸಂಪುಟ – ೧೦, (ಪರಿ)

೩. ಕಲಬುರ್ಗಿ ಎಂ. ಎಂ., ಮಾರ್ಗ – ೨ ಪು. ೧೭೩, ೧೯೦, ೧೯೯.

೪. ಗೋಪಾಲ್ ಆರ್. (ಸಂ.), ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು. ೨೪ – ೩೧.

೫. ಇತಿಹಾಸ ದರ್ಶನ, ಸಂಪುಟ – ೧೬, ಪು. ೬೪– ೬೫.

೬. ಇತಿಹಾಸ ದರ್ಶನ, ಸಂಪುಟ – ೧೫, ಪು. ೬೨– ೬೩.

೭. ಗೋಪಾಲ್ ಆರ್. (ಸಂ.), ಪೂರ್ವೋಕ್ತ, ಪು. ೩೪೭–೩೫೦.

೮. ಅದೇ. ಪುಟ ೨೯೬– ೩೦೦.

೯. ಇತಿಹಾಸ ದರ್ಶನ, ಸಂಪುಟ – ೯, ಪು. ೬–೮.

೧೦. ಇತಿಹಾಸ ದರ್ಶನ, ಸಂಪುಟ – ೧೦, ಪು. ೨೭ – ೨೮.

೧೧. ಜೆ. ಕೆ. ಯು. ಸಂ. – ೭, ಪು. ೧೫೨– ೧೬೮.

೧೨. ಎ. ಕ. ಪರಿಷ್ಕೃತ ಸಂಪುಟ – ೧೦

# ಅಧ್ಯಾಯ-೨

# ಭೌಗೋಳಿಕ ಪರಿಸರ ಮತ್ತು ಐತಿಹಾಸಿಕ ಹಿನ್ನೆಲೆ

## ಭೌಗೋಳಿಕ ಪರಿಸರ

ಯಾವುದೇ ಒಂದು ನಿರ್ದಿಷ್ಟ ಪ್ರದೇಶವನ್ನು ಅಧ್ಯಯನ ಕೈಗೊಳ್ಳುವುದಕ್ಕಿಂತ ಮುಂಚಿತವಾಗಿ ಆ ಪ್ರದೇಶದ ಭೌಗೋಳಿಕ ಅಂಶಗಳನ್ನು ತಿಳಿದುಕೊಳ್ಳುವುದು ಅವಶ್ಯಕವಾಗಿದೆ. ಪ್ರತಿಯೊಂದು ಚಾರಿತ್ರಿಕ ಘಟನೆಯು ಆಯಾ ಪ್ರದೇಶದ ಭೌಗೋಳಿಕ ಪರಿಸರವನ್ನು ಅವಲಂಬಿಸಿರುತ್ತದೆ. ಭೌಗೋಳಿಕ ಪರಿಸರದಲ್ಲಿ ಸಂಸ್ಕೃತಿಯು ಕೂಡ ತನ್ನ ಹುಟ್ಟು ಮತ್ತು ಅಂತ್ಯವನ್ನು ಕಂಡುಕೊಳ್ಳುತ್ತವೆ. ಭೂಮಿಯ ಮೇಲೆ ಕಂಡು ಬರುವ ಸ್ಮಾರಕಗಳು ಮತ್ತು ಶಾಸನಗಳಂತಹ ಪುರಾತತ್ವ ಅವಶೇಷಗಳ ಕಾಲವನ್ನು ತಿಳಿಯುವುದು ಅಷ್ಟೇ ಪ್ರಮುಖವಾಗಿರುವುದರಿಂದ ರಿಚರ್ಡ್ ಹ್ಲಾಕ್ಲ್ಯಟ್‌ರವರು ಭೂಗೋಳ ಶಾಸ್ತ್ರ ಮತ್ತು ಕಾಲಗಣನಾಶಾಸ್ತ್ರ ಸೂರ್ಯ ಚಂದ್ರ ಎಡಗಣ್ಣು ಬಲಗಣ್ಣು ಇದ್ದ ಹಾಗೆ ಎಂದಿದ್ದಾರೆ.[೧] ಈ ಹೇಳಿಕೆಯನ್ನು ಗಮನಿಸಿದಾಗ ಒಂದು ಪ್ರದೇಶದ ಚಾರಿತ್ರಿಕತೆ ಮತ್ತು ಸಂಸ್ಕೃತಿಯ ವಿಕಾಸದಲ್ಲಿ ಭೌಗೋಳಿಕ ಅಂಶಗಳು ತುಂಬಾ ಸಹಕಾರಿಯಾಗಿವೆ ಎಂದು ತಿಳಿಯುತ್ತದೆ. ಯಾವುದೇ ಒಂದು ಪರಿಸರದ ಭೌಗೋಳಿಕ ವೈಶಿಷ್ಟ್ಯತೆಗಳನ್ನು ಅರಿಯದೇ ಹೋದರೆ ಅಂತಹ ಅಧ್ಯಯನ ಅಪೂರ್ಣವೆನಿಸುತ್ತದೆ. ಪ್ರಾಚೀನ ನಾಗರೀಕತೆಗಳು ಉಗಮಿಸಿ ವಿಕಾಸ ಹೊಂದಿರುವುದು ನದಿ ದಂಡೆಗಳಲ್ಲೇ ಆಗಿರುವುದರಿಂದ ಭೌಗೋಳಿಕತೆಯ ಪ್ರಾಮುಖ್ಯತೆ ತಿಳಿಯಬಹುದು. ಒಂದು ಪ್ರದೇಶದ ವಸ್ತುನಿಷ್ಟವಾದ ಇತಿಹಾಸ ರಚಿಸಬೇಕಾದರೆ ಒಂದು ಆಯಾಪ್ರದೇಶದ ವಿಶಿಷ್ಟ ಭೌಗೋಳಿಕ ವೈಶಿಷ್ಟ್ಯತೆಯನ್ನು ಪರಿಗಣಿಸಲೇಬೇಕು. ಒಂದು ನಿರ್ಧಿಷ್ಟವಾದ ಪ್ರದೇಶದಲ್ಲಿ ಮಾನವ ಸಂಸ್ಕೃತಿ ಬೆಳೆಯಬೇಕಾದರೆ ಅಲ್ಲಿ ಕಂಡುಬರುವ ಬೆಟ್ಟಗುಡ್ಡಗಳು, ಮಣ್ಣಿನರಚನೆ, ಫಲವತ್ತತೆ, ಹವಾಗುಣ, ಸಂಪತ್ತು, ನದಿಬಯಲು ಮುಂತಾದ ಅಂಶಗಳು ಕಾರಣವಾಗಿವೆ. ಅಲ್ಲದೆ ಭೌಗೋಳಿಕ ಅಂಶಗಳಿಂದ ತಿಳಿಯಲು ಸಹಕಾರಿಯಾಗಿ ನಿಲ್ಲುತ್ತದೆ.

ಅರಸೀಕೆರೆ ತಾಲೂಕಿನ ದೇವಾಲಯಗಳು ಮತ್ತು ಸ್ಮಾರಕಗಳ ಅಧ್ಯಯನಕ್ಕೆ ತೊಡಗುವ ಮೊದಲು ಆ ಪ್ರದೇಶದ ಭೌಗೋಳಿಕ ಲಕ್ಷಣಗಳು ಯಾವ ರೀತಿ ಪ್ರಭಾವ ಬೀರಿವೆ ಎಂದು ತಿಳಿದುಕೊಳ್ಳುವುದು ಅಗತ್ಯವಾಗಿದೆ. ಹಾಸನ ಜಿಲ್ಲೆಯ ಒಂದು ತಾಲೂಕು ಅರಸೀಕೆರೆ. ಈ ತಾಲೂಕನ್ನು ಕಡೂರು, ಚಿಕ್ಕನಾಯಕನಹಳ್ಳಿ, ತಿಪಟೂರು, ಚನ್ನರಾಯಪಟ್ಟಣ, ಹಾಸನ, ಬೇಲೂರು ಮತ್ತು ಚಿಕ್ಕಮಂಗಳೂರು, ತಾಲೂಕುಗಳು ಸುತ್ತುವರೆದಿವೆ. ಹಾಗೆ ಅರಸೀಕೆರೆ ಕಸಬ, ಕಣಕಟ್ಟೆ, ಬಾಣಾವರ, ಜಾವಗಲ್ಲು, ಗಂಡಸಿ ಐದು ಹೋಬಳಿಗಳೊಂದಿಗೆ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ.[೨]

## ಪದ ನಿಷ್ಪತ್ತಿ

ಅರಸೀಕೆರೆ ಎಂಬ ಊರು ಹೊಯ್ಸಳರ ಆರಂಭ ಕಾಲದಲ್ಲಿಯೇ ಹುಟ್ಟಿಕೊಂಡಿತು. ಹನ್ನೊಂದನೆಯ ಶತಮಾನದ ಕಡೆಯಲ್ಲಿ ಎರೆಯಂಗನ ಪಟ್ಟದರಸಿ ಮಹಾದೇವಿ ಕೆರೆಯನ್ನು ಕಟ್ಟಿಸಿರುವುದಾಗಿ ಒಂದು ಶಾಸನದಿಂದ ತಿಳಿದುಬಂದಿರುವದರಿಂದ ಈ ಅರಸಿಯ ಹೆಸರಿನಿಂದಲೇ ಅರಸೀಕೆರೆ ಎಂಬ ಹೆಸರು ಈ ಊರಿಗೆ ಬಂದಿರಬಹುದು. ಮುಂದೆ ಇಮ್ಮಡಿ ಬಲ್ಲಾಳನ ಕಾಲದಲ್ಲಿ ಈ ಊರು ಅಭ್ಯುದಯದ ಪರಾಕಾಷ್ಠತೆಯನ್ನು ಕಂಡಿತು. ಬಲ್ಲಾಳನ ಪೆರಿಯರಸಿ ಉಮಾದೇವಿಯ ತವರೂರಾಗಿದ್ದ ಈ ಊರು ಅವನ ಕಾಲದಲ್ಲಿ ಹೊಯ್ಸಳ ರಾಜ್ಯದ 'ಭಂಡಾರವಾಡ'ವಾಯಿತು. ಇದಕ್ಕೆ ಬಲ್ಲಾಳಪುರ ವೀರವಿಜಯ ಬಲ್ಲಾಳಪುರ ಎಂದು ಹೆಸರುಗಳೂ ಇದ್ದು ಶಾಸನಗಳಲ್ಲಿ ರಾಜಧಾನಿ ಅರಸೀಕೆರೆ ಎನಿಸಿಕೊಂಡಿದೆ.[೩]

## ಭೌಗೋಳಿಕ ಪ್ರದೇಶ

ಅರಸೀಕೆರೆಯು ಜಿಲ್ಲಾ ಕೇಂದ್ರವಾದ ಹಾಸನದಿಂದ ೪೩ ಕಿ.ಮೀ. ದೂರದಲ್ಲಿದೆ. ಇದು ತನ್ನದೇ ಆದಂತಹ ವೈವಿದ್ಯಮಯವಾದ ವೈಶಿಷ್ಟ್ಯತೆಯನ್ನು ಹೊಂದಿದೆ. ಪ್ರಸ್ತುತ ಅಧ್ಯಯನ ಪ್ರದೇಶವಾದ ಅರಸೀಕೆರೆ ತಾಲೂಕಿನ ವಿಸ್ತೀರ್ಣ ೧೨೭೮ ಚ.ಕಿ.ಮೀ. ಒಳಗೊಂಡಿದೆ. ಒಟ್ಟು ಜನವಸತಿ ಮತ್ತು ವಸತಿ ರಹಿತ ಗ್ರಾಮಗಳು ಸೇರಿ ೩೭೦ ಗ್ರಾಮಗಳು ಇದರ ವ್ಯಾಪ್ತಿಯಲ್ಲಿ ಬರುತ್ತವೆ.[೪]

ಪ್ರಸ್ತುತ ಅಧ್ಯಯನ ಪರಿಸರವು ಬೆಟ್ಟಗುಡ್ಡಗಳ ಪ್ರದೇಶ. ಹಿರೇಕಲ್ಲು ಬೆಟ್ಟ ಎಂಬುದು ಎತ್ತರವಾದ ಬೆಟ್ಟಗಳಲ್ಲೊಂದು. ಮಿಶ್ರಿತಕಲ್ಲು ಬಂಡೆಗಳಿಂದ ಕೂಡಿದ ಚಿಕ್ಕ-ಚಿಕ್ಕ ಬೆಟ್ಟಗುಡ್ಡಗಳು ಸಹ ಕಂಡು ಬರುತ್ತವೆ. ಈ ತಾಲೂಕಿನ ದಕ್ಷಿಣ ಭಾಗದಲ್ಲಿ ಸಾಧಾರಣವಾದ ಅನೇಕ ಕುರುಚಲು ಕಾಡುಗಳು, ಹುಲ್ಲು ಬೆಳೆಯುವ ಪ್ರದೇಶಗಳೂ ಇವೆ. ಈ ಭೌಗೋಳಿಕ ಪ್ರದೇಶದಲ್ಲಿ ಭೂಸಾರಿಗೆ ವ್ಯವಸ್ಥೆ ಮಹತ್ವದ ಪಾತ್ರವಹಿಸುತ್ತದೆ. ಪ್ರಸ್ತುತ ಪರಿಸರದಲ್ಲಿ ಕಂಡು ಬರುವ ಇಂತಹ ವ್ಯವಸ್ಥೆಯಿಂದ ಮಾನವನ ಕೃಷಿ, ವ್ಯಾಪಾರ ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆ, ಶಿಕ್ಷಣ ಮುಂತಾದವುಗಳ ಬೆಳವಣಿಗೆಗೆ ಸಹಾಯಕವಾಗಿದೆ. ನಮ್ಮ ರಾಜ್ಯದ ರಾಜಧಾನಿಯಾದ ಬೆಂಗಳೂರಿನಿಂದ ಹೊನ್ನಾವರಕ್ಕೆ ಹೋಗುವ ರಾಷ್ಟ್ರೀಯ ಹೆದ್ದಾರಿ ೨೦೬ ಅರಸೀಕೆರೆಯ ಮೂಲಕ ಹಾದು ಹೋಗುತ್ತದೆ. ಹಾಗೆ ರೈಲು ಸಾರಿಗೆ ವ್ಯವಸ್ಥೆಯು ಕೂಡ ಈ ಪ್ರದೇಶದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ. ೧೮೮೯ರಲ್ಲಿ ತುಮಕೂರು ಮತ್ತು ಬೀರೂರುಗಳ ನಡುವೆ ರೈಲು ಓಡಾಡಲು ಆರಂಭಗೊಂಡಿತು. ಬೆಂಗಳೂರಿನಿಂದ-ಮಂಗಳೂರು-ಬೆಂಗಳೂರಿನಿಂದ ಶಿವಮೊಗ್ಗ ಹಾಗೆ ಬೆಂಗಳೂರಿನಿಂದ-ಹುಬ್ಬಳ್ಳಿಗೆ ಹೋಗುವ ರೈಲುಗಳು ಅರಸೀಕೆರೆ ಜಂಕ್ಷನ್ ಮೂಲಕವೇ ಹಾದು ಹೋಗುತ್ತವೆ. ಇದರಿಂದ ಕರ್ನಾಟಕದ ಪ್ರಮುಖ ನಗರಗಳನ್ನು ತಲುಪಲು ಜನರಿಗೆ ಉತ್ತಮ ಅವಕಾಶ ಒದಗಿಸಿದಂತಾಗಿದೆ.[೫]

**ಭೂ ಸ್ವರೂಪ**

ಅರಸೀಕೆರೆ ಪ್ರದೇಶವು ಉಬ್ಬು ತಗ್ಗುಗಳಿಂದ ಕೂಡಿದ ಇಳಿಜಾರು ಪ್ರದೇಶವಾಗಿದೆ. ಭೂಮಿ ದಕ್ಷಿಣದಿಂದ ಉತ್ತರದ ಕಡೆಗೆ ಇಳಿಜಾರಾಗಿದೆ. ಈ ಪ್ರದೇಶದಲ್ಲಿ ಕಲ್ಲು ಮತ್ತು ಕೆಂಪು ಮರಳು ಮಿಶ್ರಿತವಾದಂತಹ ಭೂಮಿ ಹಾಗೂ ಕೆಲವು ಕಡೆ ಕರಲು ರೀತಿಯ ನೆಲವಿದೆ. ವ್ಯವಸಾಯಕ್ಕೆ ಮಧ್ಯಮ ಯೋಗ್ಯ ಪ್ರಮಾಣದ ಭೂಮಿಯಾಗಿದ್ದು ತೋಟಗಾರಿಕೆ ಬೆಳೆಗಳು ಹೆಚ್ಚು ಕಂಡು ಬರುತ್ತವೆ. ಪ್ರಸ್ತುತ ಪರಿಸರದಲ್ಲಿ ಬೆಣಚುಕಲ್ಲಿನ ರೂಪದ ಕಲ್ಲು ಬಂಡೆಗಳಿಂದ ಕೂಡಿದ್ದು ಬೆಟ್ಟಗುಡ್ಡಗಳು ಕಂಡುಬಂದಿವೆ. ವಿರಳವಾದ ಅರಣ್ಯಸಂಪತ್ತು ವನ್ಯಜೀವಿ ಹಾಗೂ ತನ್ನದೇ ಆದಂತಹ ಜಲಸಂಪತ್ತು ಹೊಂದಿರುವುದರೊಂದಿಗೆ ಬಯಲು ಪ್ರದೇಶದಲ್ಲಿ ಮರಳು ಮಿಶ್ರಿತ ಕೆಂಪು ಮಣ್ಣು ಕಂಡುಬರುವುದರಿಂದ ಕಡಿಮೆ ಮಳೆ ಬಿದ್ದರೂ ಸಹ ಬೆಳೆಗಳನ್ನು ಬೆಳೆಯಲು ಅನುಕೂಲಕರವಾಗಿದೆ. ನೀರು ಹರಿಯುವ ಚಿಕ್ಕ ಚಿಕ್ಕ ಹಳ್ಳಗಳು, ಕೆರೆ ಕಟ್ಟೆಗಳು ಕಂಡುಬರುತ್ತವೆ. ಈ ಪ್ರದೇಶದಲ್ಲಿ ಸಾಮಾನ್ಯವಾಗಿ ರಾಗಿ, ಭತ್ತ, ನೆಲಗಡಲೆ ಅಲಸಂದಿ, ತೊಗರಿ, ಹುರುಳಿ, ಅವರೆ, ಉದ್ದು, ಹೆಸರು, ಆಹಾರ ಬೆಳೆಗಳನ್ನು ಮತ್ತು ಅಡಿಕೆ, ತೆಂಗು, ಬಾಳೆ ತೋಟಗಾರಿಕಾ[೬] ಬೆಳೆಗಳನ್ನು ಬೆಳೆಯುತ್ತಾರೆ.

**ವಾಯುಗುಣ**

ಸಾಮಾನ್ಯವಾಗಿ ಈ ಪರಿಸರದ ವಾಯುಗುಣ, ಉಷ್ಣವಲಯದ ಮಾನ್ಸೂನ್ ಮಾದರಿಯಾಗಿದ್ದು, ಚಳಿಗಾಲ, ಬೇಸಿಗಾಕಾಲ ಮತ್ತು ಮಳೆಗಾಲ ಎಂಬ ಮೂರು ಋತುಗಳು ಕಂಡು ಬರುತ್ತವೆ.

**೧) ಚಳಿಗಾಲ**

ವರ್ಷದ ಕೊನೆಯ ಡಿಸೆಂಬರ ತಿಂಗಳಿಂದ ನೂತನ ವರ್ಷದ ಫೆಬ್ರವರಿ ತಿಂಗಳವರೆಗೆ ಚಳಿಗಾಲ ಇರುತ್ತದೆ. ಈ ಅವಧಿಯಲ್ಲಿ ಗರಿಷ್ಠ ಸರಾಸರಿ ಉಷ್ಣಾಂಶ ೩೦.೯೦ ಡಿಗ್ರಿ ಸೆಂಟಿಗ್ರೇಡ್ ಆಗಿರುತ್ತದೆ. ಕನಿಷ್ಟ ಉಷ್ಣಾಂಶ ೯–೧೦ ಡಿಗ್ರಿ ಸೆಂಟಿಗ್ರೇಡ್ ಉಷ್ಣಾಂಶವನ್ನು ಹೊಂದಿರುತ್ತದೆ. ಡಿಸೆಂಬರ್, ಜನವರಿ ಮತ್ತು ಫೆಬ್ರವರಿ ತಿಂಗಳಲ್ಲಿ ಗಾಳಿಯಲ್ಲಿ ತೇವಾಂಶದ ಮಟ್ಟ ಶೇ ೩೮% ಇರುತ್ತದೆ.

**೨) ಬೇಸಿಗೆಕಾಲ**

ಮಾರ್ಚನಿಂದ ಮೇ ತಿಂಗಳವರೆಗೆ ಬಿಸಿಯಾದ ಹವಾಗುಣವಿರುತ್ತದೆ. ಈ ಕಾಲಮಾನದಲ್ಲಿ ಅನಿರೀಕ್ಷಿತವಾಗಿ ಒಮ್ಮೊಮ್ಮೆ ಮಳೆಬೀಳುತ್ತದೆ ಈ ಅವಧಿಯ ಏಪ್ರೀಲ್ ತಿಂಗಳಲ್ಲಿ ಅತ್ಯಂತ ಗರಿಷ್ಠ ಉಷ್ಣಾಂಶವನ್ನು ಹೊಂದಿದ್ದು ೩೦ ಡಿಗ್ರಿ ಇಂದ ೩೫ ಡಿಗ್ರಿ ಸೆಂಟಿಗ್ರೇಡ್ ವರೆಗೆ ದಾಖಲಾಗಿದೆ.[೭] ಮೇ ತಿಂಗಳ ಕೊನೆಯಲ್ಲಿ ಗುಡುಗು ಸಹಿತವಾಗಿ ಮಳೆ ಬೀಳುತ್ತದೆ. ಈ ಕಾಲದಲ್ಲಿ ಬಿಸಿಲ ಜಳಹವೆ ಕಂಡುಬರುವುದರಿಂದ ಈ ಕಾಲವನ್ನು ಬೇಸಿಗೆ ಕಾಲ ಎಂದು ಕರೆಯಲಾಗುತ್ತದೆ.

೩) ಮಳೆಗಾಲ

ಮೇ ತಿಂಗಳಿನಿಂದ ಅಗಸ್ಟರವರೆಗಿನ ಕಾಲವನ್ನು ಮುಂಗಾರು ಮಳೆಗಾಲ ಎಂದು ಸೆಪ್ಟೆಂಬರನಿಂದ ನವೆಂಬರ ತಿಂಗಳವರೆಗಿನ ಕಾಲವನ್ನು ಹಿಂಗಾರು ಮಳೆಗಾಲ ಎಂದು ಕೃಷಿ ತಜ್ಞರು ಗುರುತಿಸಿದ್ದಾರೆ. ಈ ಕಾಲವು ಸಾಮಾನ್ಯವಾಗಿ '೬೬೬' ಎಂ.ಎಂ. ವಾರ್ಷಿಕ ಮಳೆಯಾಗಿರುವುದನ್ನು ಗಮನಿಸಬಹುದು. ಮುಂಗಾರು ಮಳೆಗಾಲದಲ್ಲಿ ರಾಗಿ, ಭತ್ತ, ತೊಗರಿ, ಅವರೆ, ಅಲಸಂದಿ, ಹೆಸರು, ಉದ್ದು ಮುಂತಾದ ಆಹಾರ ಧಾನ್ಯಗಳನ್ನು ರೈತರು ಬಿತ್ತಿ ಬೆಳೆಯುತ್ತಾರೆ. ಹಿಂಗಾರು ಮಳೆಗಾಲದಲ್ಲಿ ಕಡಲೆ, ಉರುಳಿ, ಹರಳು ಇಂತ ಬೆಳೆಗಳನ್ನು ಬೆಳೆಯುತ್ತಾರೆ.

## ಅರಣ್ಯಸಂಪತ್ತು

ನಮ್ಮ ಜೀವ ವೈವಿದ್ಯದಲ್ಲಿ ಅರಣ್ಯ ಮತ್ತು ಮಾನವನ ನಡುವೆ ಅನನ್ಯ ಸಂಬಂಧವಿದೆ. ಪ್ರಕೃತಿದತ್ತವಾದ ಅರಣ್ಯ ಶುದ್ಧವಾದ ಗಾಳಿ, ನೀರು, ಮಣ್ಣಿನ ಫಲವತ್ತತೆ. ಭೂಮಿಯ ತೇವಾಂಶವನ್ನು ಹಿಡಿದಿಡುತ್ತದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ೧೫.೦೪೯ ಅರಣ್ಯ ಪ್ರದೇಶ ಕಂಡುಬಂದಿದ್ದು ಬಹುತೇಕವಾಗಿ ಎಲೆ ಉದುರುವ ಅರಣ್ಯಗಳಾಗಿವೆ. ಈ ಪ್ರದೇಶದಲ್ಲಿ ಹೆಚ್ಚು ದಟ್ಟವಾದ ಅರಣ್ಯಗಳು ಕಂಡುಬರುವುದಿಲ್ಲ. ಇಲ್ಲಿ ಕಂಡುಬರುವ ಬರುವ ಪ್ರಮುಖ ಜಾತಿಯ ಮರಗಳೆಂದರೆ, ನೀಲಗಿರಿ, ತೇಗ, ಬಿದಿರು, ಹೊನ್ನೆ, ಮಾವು, ಬೇವು, ಹುಣಸೆ, ಅರಳಿ, ಹೊಂಗೆ ಮುಂತಾದವು ಕಂಡು ಬರುತ್ತವೆ. ದಟ್ಟವಾದ ಅರಣ್ಯ ಕಂಡುಬರದ ಕಾರಣ ವನ್ಯಜೀವಿಗಳು ಸಹ ಕಡಿಮೆ ಅವುಗಳಲ್ಲಿ ಚಿರತೆ, ಕರಡಿ, ಜಿಂಕೆ, ನರಿ, ಮೊಲ, ಕಾಡುಹಂದಿ, ತೋಳ, ಮುಂಗಸಿ, ಕೋತಿ ವಿವಿಧ ಜಾತಿಯ ಪ್ರಾಣಿಗಳು ಮತ್ತು ನವಿಲು, ಗೂಬೆ, ಕಾಗೆ, ಹದ್ದು, ಗಿಳಿ, ಮರಕುಟಕ, ಗುಬ್ಬಚ್ಚಿ, ಗೀಜಗ, ಪಾರಿವಾಳ, ಕೋಗಿಲೆ, ಮುಂತಾದ ಪಕ್ಷಗಳು ಸಹ ಅರಣ್ಯ ಪ್ರದೇಶದಲ್ಲಿ ಕಂಡುಬರುತ್ತವೆ.

## ಜಲಸಂಪತ್ತು

ಭೂಮಿಯ ಮೇಲೆ ಕಂಡುಬರುವ ಜೀವಂತ ಪ್ರಾಣಿಗಳಿಗೆ ಗಾಳಿ ಉಸಿರಾಗಿರುವಂತೆ, ನೀರು ಜಗತ್ತಿನ ಸಮಸ್ತ ಜೀವಿಗಳಿಗೂ, ಸಸ್ಯಗಳಿಗೂ ಅಷ್ಟೇ ಮುಖ್ಯವಾಗಿದೆ. ಪಂಚಭೂತಗಳಲ್ಲೂ ನೀರು ಸಹ ಸ್ಥಾನವನ್ನು ಪಡೆದುಕೊಂಡಿದೆ. ಮಾನವ ಆಹಾರವಿಲ್ಲದಿದ್ದರೆ ಕೆಲವು ದಿನಗಳ ಕಾಲ ಬದುಕಬಲ್ಲ ಆದರೆ ನೀರಿಲ್ಲದೆ ಬದುಕಲಾರ. ಇದರಿಂದ ಪ್ರತಿಯೊಬ್ಬ ಮಾನವನ್ನು ನೀರನ್ನು ಎಷ್ಟು ಜೋಪಾನವಾಗಿ ಸಂರಕ್ಷಿಸಿಕೊಳ್ಳಲೆಬೇಕೆಂದು ತಿಳಿಯುವುದು ಪ್ರತಿಯೊಬ್ಬನ ಆದ್ಯ ಕರ್ತವ್ಯವಾಗಿದೆ.

ಅರಸೀಕೆರೆ ಪರಿಸರದಲ್ಲಿ ದೊಡ್ಡ ದೊಡ್ಡ ಕರೆಗಳು ಕಟ್ಟೆಗಳು ಹಳ್ಳಗಳು ಬಾವಿಗಳು ನೀರಿನ ಸಂಪನ್ಮೂಲಗಳಾಗಿದ್ದು ಇವು ಮಳೆಗಾಲದಲ್ಲಿ ತುಂಬಿ ಹರಿಯುತ್ತವೆ. ಬೇಸಿಗೆ ಕಾಲದಲ್ಲಿ ಒಣಗಿ ಹೋಗುತ್ತವೆ. ಈ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಕರೆಗಳು ಸಂಪೂರ್ಣವಾಗಿ ಮಳೆಯ ನೀರನ್ನು

ಅವಲಂಬಿಸಿವೆ. ನೀರಾವರಿಯಲ್ಲಿ ಕೆರೆಗಳನ್ನು ಹೊರತುಪಡಿಸಿದರೆ ಬಾವಿಗಳು ಪ್ರಮುಖ ಪಾತ್ರವಹಿಸುತ್ತವೆ. ಇತ್ತೀಚಿನ ದಿನಗಳಲ್ಲಿ ಕೊಳವೆ ಬಾವಿಗಳ ಮೂಲಕ ನೀರನ್ನು ಹೊರತೆಗೆದು ಕೃಷಿಗೆ, ಕುಡಿಯುವ ನೀರಿಗಾಗಿ ಬಳಕೆ ಮಾಡುತ್ತಿದ್ದಾರೆ. ಕೆರೆಗಳಿಂದ ೧೭೭೦ ಹೆಕ್ಟೇರುಗಳು ಬಾವಿಗಳಿಂದ ೮೨೦ ಮತ್ತು ಕೊಳವೆ ಬಾವಿಗಳಿಂದ ೧೮೦೦೦ ಹೆಕ್ಟೇರ್‌ಗಳ[೧೦] ಜಮೀನು ನೀರಾವರಿಗೆ ಒಳಪಟ್ಟಿದೆ. ಅಂತರ್ಜಲವನ್ನು ಹೊರತೆಗೆದು ಬಳಸಿದಂತೆ ದಿನೇ–ದಿನೇ ಅಂತರ್ಜಲವು ಕುಸಿಯುತ್ತಿದ್ದು ೮೦ ಅಡಿಗಳಷ್ಟು ಕೊಳವೆ ಬಾವಿ ಕೆಳಗಿಳಿಸಿದರೂ ಸಾಕಷ್ಟು ಪ್ರಮಾಣದಲ್ಲಿ ನೀರು ಲಭ್ಯವಿಲ್ಲ. ಆದರೆ ಈ ಪ್ರದೇಶದ ರೈತರು ಕೊಳವೆ ಬಾವಿಯನ್ನೇ ಪ್ರಧಾನವನ್ನಾಗಿಸಿಕೊಂಡಿದ್ದಾರೆ. ಹಾಗೆ ಕೊಳವೆ ಬಾವಿಗಳ ಮೂಲಕ ತೆಗೆದ ನೀರನ್ನು ಇತ್ತೀಚೆಗೆ ಕೆಲವು ವೈಜ್ಞಾನಿಕ ವಿಧಾನಗಳ ಮೂಲಕ ವ್ಯವಸಾಯಕ್ಕೆ ಅಳವಡಿಸಿಕೊಂಡಿದ್ದಾರೆ.

**ಜನಸಂಖ್ಯೆ**

೨೦೧೧ರ ಜನಗಣತಿಯ ಪ್ರಕಾರ ಅರಸೀಕೆರೆ ಪ್ರದೇಶದಲ್ಲಿ ಒಟ್ಟು ಜನಸಂಖ್ಯೆ ೩,೦೯,೭೩೨ ಇದರಲ್ಲಿ ೧,೫೨,೧೦೬ ಪುರುಷರಿದ್ದರೆ ಮಹಿಳೆಯರ ಸಂಖ್ಯೆ ೧,೫೦,೯೩೮ ರಷ್ಟು ಜನರಿದ್ದಾರೆ. ಮಹಿಳೆಯರಿಗಿಂತ ಪುರುಷರ ಸಂಖ್ಯೆಯೇ ಅಧಿಕವಾಗಿದೆ ಮತ್ತು ನಗರದ ವಾಸಿಗಳಿಗಿಂತ ಗ್ರಾಮೀಣ ವಾಸಿಗಳೇ ಅಧಿಕವಾಗಿದ್ದಾರೆ. ಈ ಪ್ರದೇಶದಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ಜನರು ಇದ್ದು, ಪರಿಶಿಷ್ಟ ಪಂಗಡಕ್ಕಿಂತ ಪರಿಶಿಷ್ಟ ಜಾತಿಯವರೇ ಅಧಿಕವಾಗಿದ್ದಾರೆ.[೧೧] ಒಟ್ಟಾರೆ ಒಟ್ಟು ಜನಸಂಖ್ಯೆ ಗಮನಿಸಿದಾಗ ನಗರದ ವಾಸಿಗಳಿಗಿಂತ ಗ್ರಾಮೀಣ ಪ್ರದೇಶಗಳಲ್ಲೇ ಅಧಿಕ ಜನ ನೆಲೆ ನಿಂತಿರುವುದು ಕಾಣಬಹುದು.

**ಐತಿಹಾಸಿಕ ಹಿನ್ನೆಲೆ**

**೧) ಪ್ರಾಗಿತಿಹಾಸ**

ಒಂದು ನಿರ್ಧಿಷ್ಟ ಪ್ರದೇಶದ ಚರಿತ್ರೆಯ ಮಹತ್ವವನ್ನು ಆ ಪ್ರದೇಶದಲ್ಲಿ ಮಾನವ ಬಳಸಿ ಬಿಟ್ಟುಹೋದ ಮತ್ತು ನಿರ್ಮಿಸಿದ ಹಲವಾರು ಸ್ಮಾರಕಗಳಿಂದ ತಿಳಿಯಬಹುದು. ಯಾವುದೇ ಒಂದು ಪ್ರದೇಶದ ಚರಿತ್ರೆಯನ್ನು ತಿಳಿಯುವುದಕ್ಕಿಂತ ಮೊದಲೇ ಅದರ ಹಿಂದಿನ ಪ್ರಾಗಿತಿಹಾಸ ಕಾಲದ ಕಡೆಗೂ ಸ್ವಲ್ಪ ಮಟ್ಟಿನ ಗಮನ ಹರಿಸಬೇಕಾಗುತ್ತದೆ. ಈ ಕಾಲಮಾನದಲ್ಲಿ ಮಾನವನಿಗೆ ಯಾವುದೇ ರೀತಿಯ (ಅಕ್ಷರ) ಓದು ಬರಹದ ಜ್ಞಾನವಿರಲಿಲ್ಲ. ತನ್ನ ಮನಸ್ಸಿನ ಇಚ್ಛೆಯಂತೆ ಜೀವನ ಸಾಗಿಸುತ್ತಿದ್ದು ಆಹಾರವನ್ನು ಹುಡುಕುತ್ತಾ ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಲೆಮಾರಿ ಜೀವನ ನಡೆಸುತ್ತಿದ್ದನು. ಸಾಮಾನ್ಯವಾಗಿ ಆಹಾರವನ್ನು ಬೇಟೆಮಾಡಿ ಪಡೆಯುತ್ತಿದ್ದನು. ಬೇಟೆಯಾಡಲು ಕಲ್ಲು, ಮೂಳೆಗಳಿಂದ ಆಯುಧಗಳನ್ನು ತಯಾರಿಸಿಕೊಳ್ಳುತ್ತಿದ್ದನು. ಇಂತಹ ಉಪಕರಣಗಳನ್ನು ತಯಾರಿಸಿಕೊಳ್ಳಲು ಕಲ್ಲನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದನು. ಅವುಗಳ ರೂಪ, ಬಳಸಿದ ತಾಂತ್ರಿಕತೆಗಳಿಂದ ಮಾನವನ ಜೀವನ ವಿಕಾಸ ಮತ್ತು ಬದಲಾವಣೆ ತಿಳಿಯಬಹುದು. ಈ ಹಂತದಲ್ಲಿ ಬಳಕೆಯಲ್ಲಿದ್ದ ವಸ್ತುವಿನ ಆಧಾರದಿಂದ ಶಿಲಾಯುಗ ಸಂಸ್ಕೃತಿ ಮತ್ತು ಲೋಹಯುಗ ಸಂಸ್ಕೃತಿ ಎಂದು ಎರಡು ವಿಭಾಗಗಳನ್ನಾಗಿ ಮಾಡಲಾಗಿದೆ.

ಈ ಹಂತದಲ್ಲಿ ಹೆಚ್ಚು ಶಿಲೆಯನ್ನೇ ಬಳಸಿರುವುದರಿಂದ ಶಿಲಾಯುಗ ಸಂಸ್ಕೃತಿ ಎಂದು ಕರೆಯುತ್ತಾರೆ. ಒಟ್ಟಾರೆಯಾಗಿ ಮಾನವನು ಬರವಣಿಗೆಯನ್ನು ಕಂಡು ಹಿಡಿಯುವುದಕ್ಕಿಂತ ಮುಂಚಿನ ಕಾಲವನ್ನು ಪ್ರಾಗಿತಿಹಾಸ ಕಾಲ ಎಂದು ಕರೆಯುತ್ತಾರೆ. ಹೀಗೆ ಬರವಣಿಗೆ ರಹಿತ ಕಾಲದ ಸಂಸ್ಕೃತಿಯನ್ನು ಪುನರ್ರಚಿಸಲು ಅಂದಿನ ಮಾನವರು ಬಳಸಿ ಬಿಟ್ಟು ಹೋದ ಉಪಕರಣಗಳು ಪ್ರಮುಖವಾಗಿವೆ. ಇವರು ಬಳಸಿದ ಶಿಲೆಗಳು ಮತ್ತು ಉಪಕರಣಗಳ ಆಧಾರದ ಮೇಲೆ ಈ ಕಾಲಘಟ್ಟವನ್ನು ಹಳೇಶಿಲಾಯುಗ, ಮಧ್ಯ(ಸೂಕ್ಷ್ಮ) ಶಿಲಾಯುಗ, ನೂತನ ಶಿಲಾಯುಗ, ಬೃಹತ್ ಶಿಲಾಯುಗ ಎಂದು ವಿಂಗಡಿಸಿದ್ದಾರೆ. ಹಾಗೆ ಹಳೆಶಿಲಾಯುಗವನ್ನು ಆದಿ ಹಳೆ ಶಿಲಾಯುಗ ಸಂಸ್ಕೃತಿ, ಮಧ್ಯ ಹಳೆಶಿಲಾಯುಗ ಸಂಸ್ಕೃತಿ ಮತ್ತು ಅಂತ್ಯಹಳೆಶಿಲಾಯುಗ ಸಂಸ್ಕೃತಿ ಎಂದು ಮೂರು ಭಾಗಗಳಾಗಿ ವಿಭಾಗಿಸಲಾಗಿದೆ. ಅನಂತರ ಲೋಹ ಸಂಸ್ಕೃತಿಯ ಆರಂಭದಲ್ಲಿ ಶಿಲೆಯ ಬಳಕೆಯ ಜೊತೆಗೆ ತಾಮ್ರದ ಬಳಕೆಯು ಕಂಡುಬಂದಿದ್ದರಿಂದ ಈ ಹಂತವನ್ನು ಶಿಲಾ ತಾಮ್ರಯುಗ ಸಂಸ್ಕೃತಿ ಎಂದು ನಂತರದ ಕಬ್ಬಿಣಯುಗ ಎಂದು ಕರೆಯಲಾಗಿದೆ. ಕರ್ನಾಟಕದ ಪ್ರಾಗಿತಿಹಾಸದ ಅಧ್ಯಯನವನ್ನು ೧೮೪೨ರಲ್ಲಿ ಪ್ರಿಮ್‌ರೋಸ ಅವರು ರಾಯಚೂರಿನ ಲಿಂಗಸೂರನಲ್ಲಿ (ಲಿಂಗಸುಗೂರ) ತಮ್ಮ ಕೈತೋಟವನ್ನು ಸ್ವಚ್ಛಗೊಳಿಸುವ ಸಮಯದಲ್ಲಿ ಶಿಲೋಪಕರಣಗಳಾದ ಬಾಣದ ಮೊನೆ ಹಾಗೂ ನೀಳ ಚಕ್ಕೆಗಳು ಸಿಕ್ಕಿ ಆಕಸ್ಮಿಕ ಶೋಧನೆ ಕಾರ್ಯವನ್ನು ಮೊತ್ತಮೊದಲಿಗೆ ಪ್ರಾರಂಭಿಸಿದರು. ಇವರ ನಂತರ ರಾಬರ್ಟ್ ಬ್ರೂಸ್‌ಫೂಟ್, ಕರ್ನಲ್ ಮೆಕೆಂಜಿ, ಎಂ.ಎಚ್. ಕೃಷ್ಣ, ಆರ್. ಶೇಷಾದ್ರಿ, ಎಚ್.ಡಿ. ಸಂಕಾಲಿಯ ಹಾಗೂ ಅ. ಸುಂದರ ಇವರಲ್ಲದೇ ಇನ್ನೂ ಹಲವು ವಿದ್ವಾಂಸರ ಸರ್ವೇಕ್ಷಣೆಯ ಫಲವಾಗಿ ನೂರಾರು ಶಿಲಾಯುಗದ ನೆಲೆಗಳು ಬೆಳಕಿಗೆ ಬಂದಿರುತ್ತವೆ.[೧೨]

ಪ್ರಸ್ತುತ ಅಧ್ಯಯನದ ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನಲ್ಲಿ ಸುಮಾರು ಆರು ಶಿಲಾಯುಗ ಸಂಸ್ಕೃತಿಯ ನೆಲೆಗಳು ಪತ್ತೆಯಾಗಿವೆ. ಅವುಗಳು ಕೆಳಕಂಡಂತಿವೆ.

### ಮಧ್ಯ(ಸೂಕ್ಷ್ಮ) ಶಿಲಾಯುಗ ಸಂಸ್ಕೃತಿ

ಈ ಸಂಸ್ಕೃತಿಯು ಅಂತ್ಯ ಹಳೇ ಶಿಲಾಯುಗದ ನಂತರ ಹಾಗೂ ನೂತನ ಶಿಲಾಯುಗದ ಮುಂಚಿನ ಸಾಂಸ್ಕೃತಿಕ ಹಂತವಾಗಿ ಕಂಡುಬರುತ್ತದೆ. ಚಿಟ್ಟನಹಳ್ಳಿಯಲ್ಲಿ ಸೂಕ್ಷ್ಮ ಶಿಲಾಯುಗದ ಉಪಕರಣಗಳಾದ ಮೊನೆ, ಹೆರೆಚಕ್ಕೆಗಳು ದೊರಕಿವೆ.[೧೩]

### ಬೃಹತ್‌ಶಿಲಾಯುಗ ಸಂಸ್ಕೃತಿ

ಬೃಹತ್‌ಶಿಲಾಯುಗ ಸಂಸ್ಕೃತಿಯು ನೂತನ ಶಿಲಾಯುಗ ಸಂಸ್ಕೃತಿಯ ನಂತರದ ಸಂಸ್ಕೃತಿಯಾಗಿದೆ. ಚಲುವನಹಳ್ಳಿ, ತಳಲೂರು, ಬೊಮ್ಮೇನಹಳ್ಳಿ, ರಾಂಪುರಗಳಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳೂ, ನಿಲುವುಗಲ್ಲುಗಳೂ ವಾಸ್ತವ್ಯದ ನೆಲೆಗಳನ್ನು ಗುರುತಿಸಲಾಗಿದೆ. ಚಲುವನಹಳ್ಳಿ ಮತ್ತು

ರಾಂಪುರ ನಡುವಿನ ಗುಡ್ಡದ ತಪ್ಪಲಿನಲ್ಲಿ ಸುಮಾರು ೪ ಎಕರೆ ಹರಡಿರುವ ಬೂದಿ ಹೊಲದಲ್ಲಿ ಕಂದುಕೆಂಪು ಬಣ್ಣದ ವಂಕಿ ಮತ್ತು ರೇಖಾ ವಿನ್ಯಾಸದ ಮಡಕೆ, ಕುಡಿಕೆಗಳ ಚೂರುಗಳು ಹೇರಳವಾಗಿ ದೊರಕುತ್ತವೆ. ಇದರ ಸಮೀಪದಲ್ಲಿ ೩-೫ ಅಡಿಗಳ ಎತ್ತರದ ನಿಲುವುಗಲ್ಲುಗಳನ್ನು ನೋಡಬಹುದು. ಕಲ್ಲುಚಪ್ಪಡಿಗಳನ್ನು ಹಾಸಿರುವ ಸಮಾಧಿಯನ್ನು ಗುರುತಿಸಬಹುದು. ಇಲ್ಲಿನ ಗವಿಮಠಗಳಲ್ಲಿ ಕೆಂಪು ಬಣ್ಣದ ಮತ್ತು ಬಿಳಿಯ ಬಣ್ಣದ ಮನುಷ್ಯ, ಜಿಂಕೆ, ನಾಯಿ, ನವಿಲು, ಏಣಿ ಬಲೆ ಹಾವುಗಳ ವರ್ಣಚಿತ್ರಗಳನ್ನು ಗುರುತಿಸಿದ್ದಾರೆ. ಬೊಮ್ಮೇನಹಳ್ಳಿಯ ಸಮೀಪ ಅನೇಕ ನಿಲುವುಗಲ್ಲುಗಳಿದ್ದು ಒಂದು ನಿಲುವುಗಲ್ಲು ಸುಮಾರು ೨೫ ಅಡಿ ಎತ್ತರವಾಗಿದೆ. ತಳಲೂರಿನಲ್ಲಿ ೧೦-೧೫ ಸಮಾಧಿಗಳು ಕಂಡುಬಂದಿದ್ದು[೧೪] ಇವುಗಳನ್ನು ಕ್ರಿ.ಪೂ. ೫೦೦ರ ಕಾಲವೆಂದು ಪರಿಗಣಿಸಲಾಗಿದೆ. ಕೆಂಪು ಕಪ್ಪು ಬಣ್ಣದ ಮಡಕೆ ಚೂರು, ಕುಡಿಕೆಗಳು ಅರೆಯುವ ಕಲ್ಲು ನುಣುಪುಗಲ್ಲು, ಕಬ್ಬಿಣದ ಆಯುಧ ದೊರೆತಿವೆ. ಕಲ್ಲಾಸರೆ, ನೀರಿನ ಆಸರೆ ಫಲವತ್ತಾದ ಮಣ್ಣು ಕಾಡು ಇವುಗಳು ಬೇಟೆಯ ಜೀವನದೊಂದಿಗೆ ವ್ಯವಸಾಯವನ್ನು ರೂಢಿಸಿಕೊಳ್ಳಲು ಸಹಾಯಕವಾಗಿದ್ದು ಗ್ರಾಮ ಜೀವನವು ಇಲ್ಲಿ ನೆಲೆಗೊಂಡಿತ್ತೆಂಬುದು ಸ್ಪಷ್ಟವಾಗುತ್ತದೆ. ಈ ಪ್ರದೇಶದಲ್ಲಿ ಸೂಕ್ಷ್ಮ ಶಿಲಾಯುಗ ಹಂತದಿಂದ ಬೃಹತ್ ಶಿಲಾಯುಗ ಸಂಸ್ಕೃತಿಯವರೆಗೂ ಹಲವು ನೆಲೆಗಳು ಮತ್ತು ಉಪಕರಣಗಳು ದೊರಕಿವೆ. ಇದರಿಂದ ಮಾನವ ಆರಂಭದಿಂದ ಹಿಡಿದು ನಾಗರೀಕನಾದ ಹಂತದವರೆಗಿನ ಬದಲಾವಣೆಗಳನ್ನು ತಿಳಿಯಲು ಸಾಧ್ಯವಾಗಿದೆ.

## ರಾಜಕೀಯ ಚರಿತ್ರೆ

ಮಾನವನ ವಿಕಾಸದ ಹಂತದಲ್ಲಿ ಬರವಣಿಗೆಯ ಆವಿಷ್ಕಾರ ಬಹುಮುಖ್ಯವಾದ ಪಾತ್ರ ವಹಿಸುತ್ತದೆ. ಬರವಣಿಗೆ ಕಂಡುಹಿಡಿದ ನಂತರದ ಕಾಲವನ್ನು ಇತಿಹಾಸಕಾಲ ಎಂದು ಕರೆಯುತ್ತಾರೆ. ಶಿಲಾಯುಗ ಸಂಸ್ಕೃತಿಯಿಂದ ಇತಿಹಾಸ ಕಾಲಕ್ಕೆ ಸ್ಥಿತ್ಯಂತರ ಹೊಂದಿದ ಕಾಲಮಾನವನ್ನು ಇತಿಹಾಸ ಆರಂಭಕಾಲವೆಂದು ಕರೆದಿದ್ದಾರೆ.

ಯಾವುದೇ ನಿರ್ಧಿಷ್ಟ ಪ್ರದೇಶದ ಸಾಂಸ್ಕೃತಿಕ ಇತಿಹಾಸದ ಅಧ್ಯಯನಕ್ಕೆ ಆ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ರಾಜಕೀಯ ವಂಶಗಳ ಚಾರಿತ್ರಿಕತೆಯು ಬೆನ್ನೆಲುಬಾಗಿದೆ. ರಾಜವಂಶಗಳ ಚರಿತ್ರೆ ಇಲ್ಲದೆ ಯಾವುದೇ ಅಧ್ಯಯನವನ್ನು ಕಲ್ಪಿಸಿಕೊಳ್ಳುವುದು ಕಷ್ಟಸಾಧ್ಯ. ಇತಿಹಾಸ ಪ್ರಸಿದ್ಧವಾದ ಪ್ರಸ್ತುತ ಅಧ್ಯಯನ ಪರಿಸರವು ಅನೇಕ ರಾಜ ಮನೆತನಗಳ ಆಡಳಿತಕ್ಕೆ ಒಳಪಟ್ಟಿತ್ತು. ಗಂಗರು ಕಲ್ಯಾಣ ಚಾಲುಕ್ಯರು, ಹೊಯ್ಸಳರು ವಿಜಯನಗರ ಅರಸರು, ಮೈಸೂರು ಒಡೆಯ, ಪಾಳೇಗಾರ ನಾಯಕರು ಈ ಪ್ರದೇಶದಲ್ಲಿ ಆಡಳಿತ ನಡೆಸಿದ್ದಾರೆ.

## ೧) ತಲಕಾಡಿನ ಗಂಗರು

ಈ ಪರಿಸರದಲ್ಲಿ ಆಡಳಿತವನ್ನು ನಡೆಸಿದ ಮೊದಲ ಅರಸರೆಂದರೆ ತಲಕಾಡಿನ ಗಂಗರು. ಇವರ ಕಾಲಾವದಿ ಕ್ರಿ.ಶ. ೨೫೦-೯೯೯ ಎಂದು ನಿರ್ಧರಿಸಲಾಗಿದೆ. ಕರ್ನಾಟಕದ ಕಾವೇರಿ ನದಿಯ ಭಾಗಗಳನ್ನೊಳಗೊಂಡ ಆಗ್ನೇಯ ಪ್ರದೇಶದಲ್ಲಿ ಪ್ರಥಮ ಸ್ವತಂತ್ರ ರಾಜ್ಯವನ್ನು ಕಟ್ಟಿದ ಕೀರ್ತಿ ಇವರದು. ಸುಮಾರು ೨೦೦ ವರ್ಷಗಳ ಕಾಲ ಸ್ವತಂತ್ರವಾಗಿ ರಾಜ್ಯವಾಳಿ ಕೋಲಾರ ತಲಕಾಡು ಮತ್ತು ಮಾಕುಂದಗಳನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಈ ವಂಶದ ಸ್ಥಾಪಕ ದಡಿಗ ಕೊಂಗಣಿವರ್ಮ (ಕ್ರಿ.ಶ. ೩೫೦-೪೦೦) ದುರ್ವಿನೀತ ಕ್ರಿ.ಶ. (೫೪೦-೬೦೦) ಅಂತ್ಯದ ಪ್ರಸಿದ್ಧ ದೊರೆಗಳಾಗಿದ್ದರು. ಒಂದನೇ ಶಿವಮಾರ ಶ್ರೀಪುರು, ೩ನೇ ಶಿವಮಾರ ಈ ಮನೆತನದ ಇತರ ಪ್ರಸಿದ್ಧ ದೊರೆಗಳಾಗಿದ್ದಾರೆ.

ಅರಸೀಕೆರೆ ಪರಿಸರದಲ್ಲಿಯೂ ಕೂಡ ಗಂಗ ಅರಸರ ಆಳ್ವಿಕೆಗೆ ಒಳಗಾಗಿರುವದನ್ನು ಇಲ್ಲಿ ದೊರೆತ ಶಾಸನಗಳಿಂದ ಗಮನಿಸಬಹುದು. ತಾಲೂಕಿನ ಮಾವಿನಕೆರೆ ಗಂಡಸಿಯಲ್ಲಿ ಗಂಗರ ಕಾಲದ ಶಾಸನಗಳು ದೊರೆತಿವೆ. ಹಾಗೆಯೇ ಅರಸೀಕೆರೆಯಲ್ಲಿ ಸಿಕ್ಕಿದ ೯ನೇ ಶತಮಾನದ ಶಾಸನದಲ್ಲಿ[೧೫] ಇಮ್ಮಡಿ ರಾಜಮಲ್ಲನು ಆಳುತ್ತಿದ್ದಾಗ ಎರೆಯಪ್ಪರಸನು ಆತನಿಗೆ ಆಡಳಿತದಲ್ಲಿ ನೆರವಾದನೆಂದು ಈ ಶಾಸನವು ಸ್ಪಷ್ಟವಾಗಿ ತಿಳಿಸುತ್ತದೆ.

ನೇರ್ಲಿಗೆಯ ಕ್ರಿ.ಶ.೯೧೬ರ[೧೬] ಶಾಸನದಲ್ಲಿ ನೊಳಂಬರ ವಿರುದ್ಧದ ಕದನವೊಂದನ್ನು ಉಲ್ಲೇಖಿಸಿದೆ.

## ೨) ಕಲ್ಯಾಣ ಚಾಲುಕ್ಯರು

ಅರಸೀಕೆರೆಯ ಪರಿಸರದಲ್ಲಿ ಕಲ್ಯಾಣ ಚಾಲುಕ್ಯರನ್ನು ಉಲ್ಲೇಖಿಸುವ ಶಾಸನಗಳು ಎರೆಯಂಗ, ವಿಷ್ಣುವರ್ಧನ, ೧ನೇ ನರಸಿಂಗ ಮತ್ತು ಇಮ್ಮಡಿ ಬಲ್ಲಾಳರಂಥ ವಿವಿಧ ಹೊಯ್ಸಳ ದೊರೆಗಳಿಗೆ ಸೇರಿದವು. ವಿಷ್ಣುವರ್ಧನನಿಂದ ಆರಂಭಿಸಿ ಹೊಯ್ಸಳ ದೊರೆಗಳು ಸ್ವತಂತ್ರವಾಗಿ ಆಳಿದರೆಂಬುದಾಗಿ ತಿಳಿದು ಬರುತ್ತದೆ. ಅರಸೀಕೆರೆ ತಾಲೂಕಿನ ಕಣಕಟ್ಟೆಯ ಕ್ರಿ.ಶ. ೧೧೫೧ರ ಶಾಸನದಲ್ಲಿ ಚಾಲುಕ್ಯ ಜಗದೇಕ ಮಲ್ಲ ಮತ್ತು ಹೊಯ್ಸಳ ೧ನೇ ನರಸಿಂಹರ ಉಲ್ಲೇಖವಿದೆ.[೧೭]

ಸೂಳೇಕೆರೆಯ ಕ್ರಿ.ಶ. ೧೧೫೯ ಮತ್ತು ಕೆಲ್ಲಂಗೆರೆಯ ಕ್ರಿ.ಶ. ೧೧೬೧ರ ಶಾಸನಗಳಲ್ಲಿ ಚಾಲುಕ್ಯ ೬ನೇ ವಿಕ್ರಮಾದಿತ್ಯ ಮತ್ತು ಹೊಯ್ಸಳ ೧ನೇ ನರಸಿಂಹ ವಿಕ್ತರಾಗಿರುವುದನ್ನು ಉಲ್ಲೇಖಿಸಿದೆ.[೧೮]

### ೩) ಹೊಯ್ಸಳರು

ಈ ತಾಲೂಕಿನಲ್ಲಿ ಹೆಚ್ಚಿನ ಸಂಖ್ಯೆಯ ಶಾಸನಗಳು ಹೊಯ್ಸಳರಿಗೆ ಸೇರಿವೆ. ತಾಲೂಕು ಹೊಯ್ಸಳ ರಾಜಧಾನಿಗೆ ಸಮೀಪವಾಗಿದ್ದುದು ಇದಕ್ಕೆ ಕಾರಣ. ಅರಸೀಕೆರೆ ಪರಿಸರದ ಪ್ರಾಚೀನ ಹೊಯ್ಸಳ ಶಾಸನ ಕೋಳಗುಂದದ ಕ್ರಿ.ಶ.೧೦೮೩ ಶಾಸನವಾಗಿದೆ. ಈ ಶಾಸನದಲ್ಲಿ ಹೊಯ್ಸಳ ಅರಸರನ್ನು ತ್ರಿಭುವನಮಲ್ಲ ಹೊಯ್ಸಳ ದೇವನೆಂದು ಉಲ್ಲೇಖಿಸಿದೆ. ಮತ್ತು ಅದು ವಿನಿಯಾದಿತ್ಯನೆಂದು ತೇದಿಯಿಂದ ತಿಳಿದು ಬರುತ್ತದೆ. ಏಚಮಯ್ಯ ದಂಡನಾಯಕನ ಮಗನಾದ ಪೋಚಿಮಯ್ಯ ದಂಡನಾಯಕನನ್ನು ಉಲ್ಲೇಖಿಸಿದೆ. ಅವರು ಶಿವನಿಗಾಗಿ ಆಲಯವೊಂದನ್ನು ನಿರ್ಮಿಸಿ ಭೂದಾನವನ್ನು ಮಾಡಿದರು.[೧೯]

ಅರಸೀಕೆರೆಯಲ್ಲಿ ಹೆಚ್ಚಿನ ಶಾಸನಗಳು ಹೊಯ್ಸಳರ ಕಾಲದವೆ ಆಗಿವೆ. ಅದರಲ್ಲಿ ದೇವಾಲಯ ಮತ್ತು ಕೆರೆಗಳ ನಿರ್ಮಾಣ ಮಾಡಿ ಕೆರೆಕಟ್ಟೆಗಳ ಕೆಳಗಿನ ಭೂಮಿಯನ್ನು ದಾನ ಕೊಟ್ಟಿರುವುದನ್ನು ಈ ಶಾಸನಗಳಿಂದ ಗಮನಿಸಬಹುದು.

### ೪) ವಿಜಯನಗರದ ಅರಸರು

ಅರಸೀಕೆರೆ ಪರಿಸರವು ಕೂಡ ವಿಜಯನಗರ ಅರಸರ ಆಳ್ವಿಕೆಗೆ ಒಳಗಾಗಿರುವುದನ್ನು ಶಾಸನಾಧಾರಗಳಿಂದ ವಿಶ್ಲೇಷಿಸಬಹುದು. ಈ ತಾಲೂಕಿನ ಹೆಚ್ಚಿನ ಶಾಸನಗಳು ವಿಜಯನಗರ ಪೂರ್ವದಲ್ಲಿ ನಿರ್ಮಾಣವಾದಂತಿವೆ. ಕೆಲವು ಕಲೆಗಳು ವಿಜಯನಗರ ಕಾಲದಲ್ಲಿ ರಚನೆಯಾಗಿರುವುದನ್ನು ಶಾಸನಾಧಾರಗಳಿಂದ ಗುರುತಿಸಬಹುದು. ಹಾಗೆಯೇ ವಿಜಯನಗರ ಪೂರ್ವದಲ್ಲಿ ನಿರ್ಮಾಣವಾದ ಕೆಲವು ಕೆರೆಗಳ ನಿರ್ವಹಣೆಯನ್ನು ವಿಜಯನಗರ ಕಾಲದಲ್ಲಿ ಮಾಡಿರುವುದನ್ನು ಇಲ್ಲಿ ಗಮನಿಸಬಹುದು.

ಗಂಡಸಿಯ ಕ್ರಿ.ಶ. ೧೪೦೩೭ ಶಾಸನದಲ್ಲಿ ಬಾಯಣ್ಣನೆಂಬಾತನು ತನ್ನ ತಾಯಿಯ ಹೆಸರಿನಲ್ಲಿ ಮಹಾಪುರವೆಂಬ ಗ್ರಾಮವನ್ನು ನಿರ್ಮಿಸಿ ಅಲ್ಲಿ ಕೆರೆಯನ್ನು ಕಟ್ಟಿಸಿದ. ಆ ಕೆರೆಯ ದಕ್ಷಿಣ ಭಾಗದಲ್ಲಿ ಕೋಡಿಯನ್ನು ನಿರ್ಮಿಸಿ ಹಿರಿಯ ಗಂಡಸಿಯ ಅಗ್ರಹಾರವನ್ನು ಜೀರ್ಣೋದ್ಧಾರ ಮಾಡಿ ಅಲ್ಲಿನ ಹಿರಿಯಕೆರೆಗೆ ನಿರ್ಮಿಸಿದ ಕಾಲುವೆಗೆ ರಕ್ಷಣಾರ್ಥವಾಗಿ ಊರ ಮುಂದೆ ಹನುಮಂತನ ದೇವಸ್ಥಾನ ಪ್ರತಿಷ್ಠಾಪನೆ ಮಾಡಿಸಿದ ಉಲ್ಲೇಖವಿದೆ.[೨೦]

ವಿಜಯನಗರ ಅರಸರಿಗೆ ಸಂಬಂಧಿಸಿದಲ್ಲಿ ಅರಸೀಕೆರೆ ಪರಿಸರದಲ್ಲಿ ನೇರ್ಲಿಗೆ, ಕೆಲ್ಲಂಗೆರೆ, ತಿಮ್ಮನಹಳ್ಳಿ, ಜಾವಗಲ್ ಇನ್ನೂ ಮುಂತಾದ ಸ್ಥಳಗಳಲ್ಲಿರುವುದನ್ನು ಗಮನಿಸಬಹುದು.

## ೫) ಮೈಸೂರು ಒಡೆಯರು

ವಿಜಯನಗರ ಅರಸರ ನಂತರ ಮೈಸೂರು ಒಡೆಯರು ಆಳ್ವಿಕೆಗೆ ಅರಸೀಕೆರೆಯು ಒಳಗಾಗಿರುವುದನ್ನು ತಿರುಪತಿಯಲ್ಲಿ ದೊರೆತ ನಾಲ್ಕು ಶಾಸನಗಳಿಂದ ತಿಳಿದುಬರುತ್ತದೆ. ಅರಸೀಕೆರೆ ತಾಲೂಕಿನ ತಿರುಪತಿಯ ಕ್ರಿ.ಶ. ೧೭೪೫ರ ನಾಲ್ಕು ತಾಮ್ರಶಾಸನದಲ್ಲಿ ರಾಜರ ಹೆಸರನ್ನು ಉಲ್ಲೇಖಿಸಿಲ್ಲ. ಇವುಗಳ ತೇದಿ ಕ್ರಿ.ಶ. ೧೭೪೫ಕ್ಕೆ ಸಂಬಂಧಿಸಿದೆ. ತಿರುಪತಿಯು ಕ್ರಿ.ಶ. ೧೭೪೪ರ ಶಾಸನದಲ್ಲಿ ಅಮರಗಿರಿ ತಿರುಪತಿಯ ವೆಂಕಟಾಚಲಸ್ವಾಮಿ ನಿತ್ಯ ಪಂಡಿತರ ಮತ್ತು ದೀಪಾರಾಧನೆ ಸೇವೆಗೆ ದಾನ ನೀಡಿದ ವಿಷಯವನ್ನು ಉಲ್ಲೇಖಿಸಿದೆ.[೨೧]

ಅರಸೀಕೆರೆ ಪ್ರದೇಶದಲ್ಲಿ ಗಂಗರ ಕಾಲದಿಂದ ಅನೇಕ ರಾಜಮನೆತನಗಳು ಆಳ್ವಿಕೆ ಮಾಡಿವೆ. ಇಲ್ಲಿರುವ ಈಶ್ವರ ದೇವಸ್ಥಾನ ಹೊಯ್ಸಳ ವಾಸ್ತುಶಿಲ್ಪಕ್ಕೆ ಪ್ರಸಿದ್ಧವಾಗಿದೆ. ವಿಜಯನಗರ ಅರಸರ ಕಾಲದಲ್ಲಿ ಅರಸೀಕೆರೆಯು ಚನ್ನಪಟ್ಟಣದ ಜಗದೇವರಾಯನ ಆಡಳಿತದ ಹತೋಟಿಯಲ್ಲಿತ್ತು. ಅನಂತರ ತರೀಕೆರೆಯ ತಿಮ್ಮಪ್ಪನಾಯಕನ ಕೈಗೆ ಬಂತು. ಕೊನೆಗೆ ಇಕ್ಕೇರಿ ಶಿವನಾಯಕನ ಆಳ್ವಿಕೆಗೆ ಬಂದು ೧೬೯೦ ರಲ್ಲಿ ಮೈಸೂರು ಒಡೆಯರ ಕಾಲದಲ್ಲಿ ಮರಾಠರ ದಾಳಿಗೆ ತುತ್ತಾಗಿ ಹಾನಿಗೊಳಗಾಯಿತು. ಅನಂತರ ಮೈಸೂರು ಒಡೆಯರು ತಾವು ಸಲ್ಲಿಸಬೇಕಾದ ಪೊಗದಿಗೆ ಒತ್ತೆಯಾಗಿ ಮರಾಠರಿಗೆ ಇದನ್ನು ಒಪ್ಪಿಸಿದರು. ಈ ಮನೆತನಗಳ ಆಳ್ವಿಕೆಯ ಅವಧಿಯಲ್ಲಿ ನಿರ್ಮಾಣವಾದ ದೇವಾಲಯಗಳು, ಮೂರ್ತಿ ಶಿಲ್ಪಗಳು ಮತ್ತು ಕೋಟೆಗಳ ಬಗ್ಗೆ ಅಧ್ಯಯನದಲ್ಲಿ ತಿಳಿಸಲಾಗಿದೆ.

**ಕೊನೆಟಿಪ್ಪಣೆಗಳು**

೧. ಶ್ರೀನಿವಾಸಮೂರ್ತಿ ಹೆಚ್.ವಿ., ಇತಿಹಾಸ ಸಂಶೋಧನಾ ಸಮೀಕ್ಷೆ, ಪು. ೨೩.

೨. ಇಂಟರ್‌ನೆಟ್‌ನಿಂದ ಸಂಗ್ರಹಿಸಿದ ಮಾಹಿತಿ.

೩. ಕನ್ನಡ ವಿಷಯ ವಿಶ್ವಕೋಶ, ಸಂಪುಟ–೧, ಪು.೫೨.

೪. ಅದೇ ಪು. ೫೨–೫೩.

೫. ಅದೇ ಪು. ೫೩.

೬. ಕೃಷಿ ಇಲಾಖೆಯಿಂದ ಪಡೆದ ಮಾಹಿತಿ.

೭. ಜಿಲ್ಲಾ ಸಂಖ್ಯಾ ಸಂಗ್ರಹಣ ಕಛೇರಿಯಿಂದ ಸಂಗ್ರಹಿಸಿದ ಮಾಹಿತಿ.

೮. ಸಣ್ಣ ನೀರಾವರಿ ಇಲಾಖೆಯಿಂದ ಪಡೆದ ಮಾಹಿತಿ.

೯. ತಾಲೂಕು ಅರಣ್ಯ ಇಲಾಖೆಯಿಂದ ಸಂಗ್ರಹಿಸಿದ ಮಾಹಿತಿ.

೧೦. ಸಣ್ಣ ನೀರಾವರಿ ಇಲಾಖೆಯಿಂದ ಪಡೆದ ಮಾಹಿತಿ.

೧೧. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯಿಂದ ಸಂಗ್ರಹಿಸಿದ ಮಾಹಿತಿ.

೧೨. ಶಿವತಾರಕ್ ಕೆ.ಬಿ., ೨೦೦೧, ಹಾಸನ ಜಿಲ್ಲಾ ಇತಿಹಾಸ ಮತ್ತು ಪುರಾತತ್ವ, ಪು. ೬೪೬.

೧೩. ಗೋಪಾಲ್ ಆರ್. (ಸಂ), ಹಾಸನ ಜಿಲ್ಲಾ ಇತಿಹಾಸ ಮತ್ತು ಪುರಾತತ್ವ, ಪು. ೬೪೬.

೧೪. ಅದೇ ಪು. ೧೮.

೧೫. ಎಪಿಗ್ರಫಿಯ ಕರ್ನಾಟಿಕ (ಪರಿ) ಸಂ., ೧೦, ೧೯೯೭. ನಂ. ೩೧೬ (XV ಅಕೆ ೨೧೫) ಅರಸೀಕೆರೆ, ಪು. ೩೮೭, ಅರಸೀಕೆರೆ ತಾಲೂಕ, ಹಾಸನ ಜಿಲ್ಲೆ.

೧೬. ಎ.ಕ. ಪೂರ್ವೋಕ್ತ, ನಂ. ೨೮೪ (XV ಅಕೆ ೨೩೭) ನೇರ್ಲಿಗೆ, ಪು. ೩೪೭.

೧೭. ಎ.ಕ. ಪೂರ್ವೋಕ್ತ, ನಂ. ೯೨ (V ಅಕೆ ೫೭ ಕಣಕಟ್ಟೆ, ಪು. ೧೨೧.

೧೮. ಅದೇ ನಂ. ೧೪೦ (V ಅಕೆ ೧೧೯) ಸೂಳೇಕೆರೆ, ಪು. ೧೮೩.

೧೯. ಅದೇ ನಂ. ೩೧೧ (VXV ಅಕೆ ೧೯೪) ಕೋಳಗುಂದ, ಪು. ೩೭೫.

೨೦. ಅದೇ ನಂ. ೧೯೮, (V ಅಕೆ ೧೫೯) ಗಂಡಸಿ, ಪು. ೨೫೩.

೨೧. ಅದೇ ನಂ. ೧೩೪, (V ಅಕೆ ೯೪) ತಿರುಪತಿ, ಪು. ೧೭೨.

# ಅಧ್ಯಾಯ–೩

## ದೇವಾಲಯಗಳ ಉಗಮ, ವಿಕಾಸ ಮತ್ತು ಲಕ್ಷಣಗಳು

ಗತಕಾಲದ ಸಾಂಸ್ಕೃತಿಕ ಚರಿತ್ರೆಯ ಹೆಗ್ಗುರುತುಗಳಾಗಿರುವ ದೇವಾಲಯಗಳು ಮಧ್ಯಕಾಲದ ವೇಳೆಗೆ ದೇವಾಲಯಗಳಿಲ್ಲದೆ ಬದುಕೇ ಇಲ್ಲ ಎನ್ನುವಷ್ಟರಮಟ್ಟಿಗೆ ಬೆಳೆದಿವೆ. ದೇವಾಲಯಗಳ ಅಧ್ಯಯನವು ಚರಿತ್ರೆಯ ರಚನೆಯಲ್ಲಿ ಬಹುಮುಖ್ಯ ಪುರಾತತ್ವೀಯ ಆಕರಗಳಾಗಿ ಕಂಡುಬರುತ್ತವೆ. ಇಂತಹ ದೇವಾಲಯಗಳ ಬೆಳವಣಿಗೆಯ ವಿವಿಧ ಹಂತಗಳನ್ನು ಗುರುತಿಸುವುದು ಅಲ್ಪಮಟ್ಟಿಗೆ ಸಾಧ್ಯವಾದರೂ ಉಗಮದ ಬಗ್ಗೆ ನಿಖರವಾಗಿ ಗುರುತಿಸಲಿ ಸಾಧ್ಯವಿಲ್ಲ. ಈ ವಿಷಯದಲ್ಲಿ ಎ.ಎಸ್. ಅಲ್ಟೇಕರ್‌ರವರು ಮೂರ್ತಿ ಪೂಜೆಯ ಆರಂಭ ಮತ್ತು ಬೆಳವಣಿಗೆ ವಿಷಯವಾಗಿ ಇನ್ನೂ ಕೆಲಸ ನಡೆಯಬೇಕಾಗಿದೆ ಎಂದು ಹೇಳಿದ್ದಾರೆ.

ಒಂದು ದೇಶದ ಸಾಂಸ್ಕೃತಿಕ ಸಂಪತ್ತು ಎನಿಸಿಕೊಂಡಿರುವ ದೇವಾಲಯಗಳು ಆ ದೇಶದ ಸಂಸ್ಕೃತಿಯನ್ನು ಶ್ರೀಮಂತಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಈ ನಿಟ್ಟಿನಲ್ಲಿ ಭಾರತ ಪ್ರಾಚೀನ ಕಾಲದಿಂದಲೂ ಭವ್ಯ ಪರಂಪರೆಯನ್ನು ಹೊಂದಿದ ದೇಶವಾಗಿದೆ. "ಭಾರತದ ತುಂಬಾ ಓಡಾಡಿದ ಯಾವುದೇ ವ್ಯಕ್ತಿಗೆ ಪ್ರತಿ ಹಳ್ಳಿ ಹಳ್ಳಿಯಲ್ಲೂ ನದಿ ದಡದಲ್ಲಿ, ಊರ ಮಧ್ಯದಲ್ಲಿ, ಬೆಟ್ಟದ ಮೇಲೆ, ಊರಿನ ಯಾವುದೇ ಸಾರ್ವಜನಿಕ ಸ್ಥಳದಲ್ಲಿ ಹೀಗೆ ಒಂದಲ್ಲಾ ಒಂದು ಕಡೆ ದೇವಾಲಯಗಳು ಕಾಣಬರುತ್ತವೆ."[೧] ಧಾರ್ಮಿಕ ಕಲ್ಪನೆಗಳನ್ನು ದೈವತ್ವದಲ್ಲಿ ನಂಬಿಕೆಯನ್ನು ಹೊಂದಿದ ಭಾರತೀಯರು ದೇಶದ ತುಂಬೆಲ್ಲಾ ವೈವಿಧ್ಯಮಯವಾದ ದೇವಾಲಯಗಳನ್ನು ನಿರ್ಮಾಣ ಮಾಡಿದರು. ಬಹುಶಃ ಜಗತ್ತಿನ ಯಾವುದೇ ಭಾಗದಲ್ಲಿ ಕಂಡು ಬರದೇ ಇರುವ ಅಧಿಕ ಸಂಖ್ಯೆಯ ದೇವಾಲಯಗಳು ಭಾರತದಲ್ಲಿವೆ. ಈ ದೇವಾಲಯಗಳು ಪ್ರಾಚೀನ ಕಾಲದ ಧಾರ್ಮಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಗಾಗಿ ಅವರು ನೀಡಿರುವ ಪ್ರೋತ್ಸಾಹವನ್ನು, ರೂವಾರಿಗಳ ಕೈಚಳಕ ಮತ್ತು ಕಲಾ ನೈಪುಣ್ಯತೆಯ ಮಹಿಮೆಯನ್ನು ಇಂದಿನ ಜನತೆಗೆ ಸಾರಿ ಹೇಳುವ ಜೀವಂತ ಸಾಕ್ಷಿಯಾಗಿವೆ. ಅಲ್ಲದೆ ಕಾಲಕ್ಷೇತ್ರಕ್ಕೆ ನೀಡಿದ ಮಹಾನ್ ಕೊಡುಗೆಗಳಾಗಿವೆ.

ಪ್ರಾಚೀನ ಮತ್ತು ಮಧ್ಯಕಾಲೀನ ಸಾಂಸ್ಕೃತಿಕ ಇತಿಹಾಸ ರಚನೆಯಲ್ಲಿ ದೇವಾಲಯಗಳು ಪರಿಣಾಮಕಾರಿ ಮಾಧ್ಯಮಗಳಾಗಿ ಕಾರ್ಯ ನಿರ್ವಹಿಸಿವೆ. ದೇವಾಲಯಗಳು ಮಾನವನ ಧಾರ್ಮಿಕ ಶ್ರದ್ಧೆ, ಭಕ್ತಿ ಮತ್ತು ನಂಬಿಕೆಗಳ ಪ್ರತೀಕಗಳಾಗಿ ಬೆಳೆದು ಬಂದಿವೆ. "ಅಲೆಮಾರಿಯಾಗಿದ್ದ ಮಾನವ ಒಂದು ಕಡೆ ನೆಲೆಯಾಗಿ ನಿಲ್ಲಬೇಕೆಂದೂ ಒಂದು ಸುರಕ್ಷಿತ ಗೂಡಿನಲ್ಲಿ ವಾಸಿಸಬೇಕೆಂದು ಎಂದಿನಿಂದ ಬಯಸಿದನೋ ಅಂದಿನಿಂದ ತನಗಾಗಿ ಮನೆಯನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದ. ಸುತ್ತಗೋಡೆ ಅದರ ಮೇಲೆ ವಿವಿಧ ಆಕಾರದ ಮುಚ್ಚಿಗೆ, ಮುಂಭಾಗದಲ್ಲಿ ಬಾಗಿಲು, ಅದರ ಮೇಲೆ ಗಾಳಿ ಬೆಳಕು ಬರಲು ಕಮಾನು–ತೆರವು ಹೀಗೆ ಅವನ ಮನೆ ರೂಪುಗೊಂಡಿತು. ಇದು ವಾಸ್ತುಶಿಲ್ಪದ ಪ್ರಾಥಮಿಕ ಹೆಜ್ಜೆ.[೨]

ಮಾನವನು ಪ್ರಕೃತಿಯೊಡನೆ ಬದುಕಬೇಕಾದ ಸಂದರ್ಭದಲ್ಲಿ ಪ್ರಕೃತಿಯ ವಿಸ್ಮಯಗಳಾದ ಗಾಳಿ, ಮಳೆ, ಗುಡುಗು, ಸಿಡಿಲು, ಕಾಡ್ಗಿಚ್ಚು ಮೊದಲಾದವು ಅವನಲ್ಲಿ ಭೀತಿ ಹುಟ್ಟಿಸಿದವು. ಇವುಗಳಿಂದ ಅವನು ನಿಸರ್ಗದಲ್ಲಿ ಎಲ್ಲಕ್ಕೂ ಮಿಗಿಲಾದ ಒಂದು ಅದ್ಭುತವಾದ ಶಕ್ತಿ ಇದೆ ಎಂದು ಅರಿತುಕೊಂಡನು. ತನ್ನ ಕೆಲಸ ಕಾರ್ಯಗಳಿಗೆ ಪೂರಕವಾಗಿ ಬೆಂಬಲ ನೀಡಬಹುದಾದ ಈ ಶಕ್ತಿಗೆ ಅವನು ಒಂದು ಮೂರ್ತ ರೂಪ ನೀಡಿ ಪೂಜಿಸಲು ಪ್ರಾರಂಭಿಸಿದನು. ಅದರ ರಕ್ಷಣೆಗೆ ಭೂಮಿಯ ಮೇಲೆ ಕಟ್ಟಡವನ್ನು ಕಟ್ಟಿದನು. "ತನಗಾಗಿ ಕಟ್ಟಿಕೊಂಡ ಮನೆ ಗೃಹ ವಾಸ್ತುಶಿಲ್ಪ ಎನಿಸಿದರೆ ತನ್ನ ದೇವರಿಗಾಗಿ ಕಟ್ಟಿದ್ದು ಧಾರ್ಮಿಕ ವಾಸ್ತುಶಿಲ್ಪ ಅಥವಾ ದೇವಾಲಯ ವಾಸ್ತುಶಿಲ್ಪ ಎನಿಸಿತು."[೩]

ಭೂಮಿಯನ್ನು ಒಂದು ವಸ್ತುವೆಂದು ಪರಿಗಣಿಸಿ ಅದರ ಮೇಲೆ ಕಟ್ಟಲ್ಪಟ್ಟ ಗೃಹ ಗುಡಿ ಮುಂತಾದವುಗಳನ್ನು ವಾಸ್ತುವೆಂದು ಕರೆಯಲಾಗಿದೆ.[೪] ವಾಸ್ತುಶಿಲ್ಪವನ್ನು ಕುರಿತು ಹಲವು ಪ್ರಾಚೀನ ಶಾಸ್ತ್ರ ಗ್ರಂಥಗಳು ಹಾಗೂ ವಿದ್ವಾಂಸರು ಹಲವು ವಿಚಾರಧಾರೆಗಳನ್ನು ಹರಿಸಿರುವುದನ್ನು ಗಮನಿಸಬಹುದು. ಅಂಥವುಗಳಲ್ಲಿ ಬಹುಮುಖ್ಯವಾಗಿ ಬೃಹತ್ಸಂಹಿತೆ, ಮಾನಸಾರ, ಮಯಮತ, ಸಮರಾಂಗಣಸೂತ್ರಧಾರ, ಕಾಶ್ಯಪಶಿಲ್ಪಿ, ಅಗಸ್ತ್ಯ, ಸಕಲಾಧಿಕಾರ, ಅಪರಾಜಿತಪುಚ್ಚ, ಪ್ರಸಾದಮಂಡನ! ರೂಪಮಂಡನ, ಅಭಿಲಾಷಿತಾರ್ಥಚಿಂತಾಮಣಿ, ತಂತ್ರಸಮುಚ್ಚಯ ಮುಂತಾದವುಗಳು ನಮ್ಮ ಪ್ರಾಚೀನ ಕಾಲದ ದೇವಾಲಯ ವಾಸ್ತುಶಿಲ್ಪವನ್ನು ಕುರಿತು ಮಾಹಿತಿ ನೀಡುವ ಶಾಸ್ತ್ರ ಗ್ರಂಥಗಳು ಎಂದು ಹೇಳಬಹುದು.[೫] ಮಯಮತ ಗ್ರಂಥವು 'ವಾಸ್ತು' ಶಬ್ಧವನ್ನು ಎರಡು ಹಂತಗಳಲ್ಲಿ ವಿವರಿಸಿದೆ. ಮರ್ತ್ಯರು ಮತ್ತು ಅಮರ್ತ್ಯರು ವಾಸಿಸುವ ಸ್ಥಳಕ್ಕೆ ವಸ್ತು ಎಂದು ಹೆಸರು. ವಸ್ತುವನ್ನು ಆಶ್ರಯಿಸಿದ್ದು ವಾಸ್ತು ಎಂದು ಗುರುತಿಸಲ್ಪಡುತ್ತದೆ. ಪ್ರಾಸಾದ, ಹರ್ಮ್ಯ, ಸೌಧ ಇತ್ಯಾದಿಗಳು ವಸ್ತುವನ್ನು ಆಶ್ರಯಿಸಿದ್ದು ವಾಸ್ತು ಎಂದೆನಿಸುತ್ತದೆ. ಆದ್ದರಿಂದ ವಾಸ್ತು ಎಂದಲ್ಲಿ ವಸತಿ ಯೋಗ್ಯ ಭೂಮಿ ಮತ್ತು ಆ ಭೂಮಿಯ ಮೇಲೆ ನಿಂತ ಕಟ್ಟಡ ಎರಡನ್ನು ಒಳಗೊಳ್ಳುತ್ತದೆ.[೬] ಗರುಡ ಪುರಾಣದ ಒಂದು ಶ್ಲೋಕವು ಗ್ರಾಮಗಳು, ನಗರಗಳು, ಕೋಟೆಗಳು, ಪಟ್ಟಣಗಳು, ಮಠಗಳು ಸಹ ವಾಸ್ತುಗಳೆಂದು ಹೇಳುತ್ತದೆ.[೭] ಆಲಯಗಳನ್ನು ಕಟ್ಟಲು ಬಳಸಿದ ಇಟ್ಟಿಗೆ, ಕಲ್ಲು, ಮರ ಹಾಗೂ ಕಬ್ಬಿಣಗಳನ್ನು ಸಹ ವಿಶ್ವಕರ್ಮ ವಾಸ್ತುಶಾಸ್ತ್ರಗ್ರಂಥದಲ್ಲಿ ವಾಸ್ತುಗಳೆಂದೇ ಕರೆಯಲಾಗಿದೆ.[೮] ದೇವಾಲಯ ಅರಮನೆ ಅಥವಾ ರಾಜಗೃಹ, ದೇವತಾ ಮೂರ್ತಿಗಳು, ಸರ್ವಜನೋಪಯೋಗಿ ಗೃಹಗಳು, ಬಾವಿ, ಪುಷ್ಕರಣಿ ಮುಂತಾದವುಗಳ ರಚನೆಯನ್ನು ಶುಕ್ರನೀತಿ ಗ್ರಂಥವು ವಾಸ್ತುಶಿಲ್ಪ ಶಾಸ್ತ್ರದಡಿಯಲ್ಲಿ ಗುರುತಿಸುತ್ತದೆ. ಒಟ್ಟಾರೆ ವಾಸ್ತುಶಿಲ್ಪವು ನಾಗರೀಕತೆಯನ್ನು ರೂಪಿಸುವ ಮಾತೃಕೆ.

ವಾಸ್ತುಶಿಲ್ಪ ಎಂಬ ಪರಿಭಾಷೆಗೆ ವಿಶಾಲವಾದ ಅರ್ಥವ್ಯಾಪ್ತಿ ಇದ್ದರೂ ಸಾಮಾನ್ಯವಾಗಿ ದೇವಾಲಯಗಳು ಮಾತ್ರ ವಾಸ್ತುಶಿಲ್ಪಗಳಾಗಿ ಕಣ್ಮುಂದೆ ನಿಲ್ಲುತ್ತವೆ. ಸ್ತೂಪ, ಚೈತ್ಯ, ವಿಹಾರ, ಬಸದಿ, ಮಸೀದಿ, ಚರ್ಚು, ಕೆರೆ, ಕಟ್ಟೆ, ಬುರುಜು, ಕೋಟೆ ಹಾಗೂ ಮನೆಗಳಂತಹ ಎಲ್ಲಾ ರಚನೆಗಳು ವಾಸ್ತುಶಿಲ್ಪಗಳೇ ಆಗಿವೆ. ಆದರೆ ಅಧ್ಯಯನದ ಅನುಕೂಲಕ್ಕಾಗಿ ಧಾರ್ಮಿಕ ವಾಸ್ತುಶಿಲ್ಪವನ್ನು ದೇವಾಲಯಕ್ಕೂ ಹಾಗೂ 'ಶಿಲ್ಪ' ಎಂಬುದನ್ನು ಮೂರ್ತಿಗಳಿಗೂ ಅನ್ವಯವಾಗುವಂತೆ ಅನುಕ್ರಮದಲ್ಲಿ ಬಳಸುತ್ತಾರೆ.[೯]

ದೇವಾಲಯಗಳ ಅಧ್ಯಯನದ ಸಂದರ್ಭದಲ್ಲಿ ಅವುಗಳ ಪ್ರಾಚೀನತೆಯನ್ನು ಸರಿಯಾಗಿ ಗುರುತಿಸುವಲ್ಲಿ ವಿದ್ವಾಂಸರಲ್ಲಿಯೂ ಭಿನ್ನಾಭಿಪ್ರಾಯಗಳಿವೆ. ಭಾರತದ ಪ್ರಾಚೀನ ನಾಗರೀಕತೆ ಸಿಂಧೂ ಬಯಲಿನ ಸಂಸ್ಕೃತಿಯ ಜನರು ಪ್ರಕೃತಿಯ ಆರಾಧಕರಾಗಿದ್ದು, ಪಶುಪತಿ ಮೊದಲಾದ ವಿಗ್ರಹಗಳನ್ನು ಪೂಜಿಸುತ್ತಿದ್ದರು ಎಂಬುದು ಬೆಳಕಿಗೆ ಬಂದಿರುವ ಸಂಗತಿಯಾಗಿದೆ. ಆದರೆ ಈ ಅವಧಿಯಲ್ಲಿ ವಿಗ್ರಹಗಳಿಗೆಂದು ಕಟ್ಟಿದ ದೇಗುಲ ವಾಸ್ತು ಇದುವರೆಗೆ ಸ್ಪಷ್ಟವಾಗಿ ಗೋಚರಿಸಿಲ್ಲ. ಹಾಗಿದ್ದು ಈ ಸಂಸ್ಕೃತಿಯಿಂದ ಒಂದಂಶ ಸ್ಪಷ್ಟವಾಗುತ್ತದೆ. ಆದೇನೆಂದರೆ ದೇಗುಲ ವಾಸ್ತು ರಚನೆಗೆ ಪೂರ್ವದಲ್ಲಿ ಮೂರ್ತಿಶಿಲ್ಪದ ಬೆಳವಣಿಗೆ ಹಾಗೂ ಆರಾಧನೆ ಇತ್ತೆಂಬುದು[೧೦] ಹರಪ್ಪ ಮತ್ತು ಮಹೆಂಜೋದಾರೋ ನಿವೇಶನಗಳ ಉತ್ಖನನಗಳಲ್ಲಿ ದೊರೆತ ಕೆಲವು ಪಳೆಯುಳಿಕೆಗಳನ್ನು ಕುರಿತು 'ಸರ್ ಜಾನ್ ಮಾರ್ಷಲ್' ಅವರು ಮೂರ್ತಿ ಪೂಜೆ ಆರಾಧನೆಯನ್ನು ಗುರುತಿಸಿದ್ದಾರೆ. ಆದ್ದರಿಂದ ಮೂರ್ತಿ ಪೂಜೆ ಇದ್ದಿತು ಎಂದರೆ ಅವರ ರಕ್ಷಣೆಗೆ 'ದೇಗುಲವಾಸ್ತು' ಇರಲೇಬೇಕಲ್ಲವೇ. ಇದಕ್ಕೆ ಸ್ಪಷ್ಟ ನಿದರ್ಶನಗಳು ದೊರೆತಿಲ್ಲ. ಆದರೆ ಇಲ್ಲಿನ ನಗರಗಳಲ್ಲಿ ರಕ್ಷಣಾತ್ಮಕವಾಗಿ ಕೋಟೆಯ ಗೋಡೆ, ಸಾರ್ವಜನಿಕರ ಬಳಕೆಗಾಗಿ ನಿರ್ಮಿಸಿರುವ ಬೃಹತ್ ಗಾತ್ರದನ ಸಭಾಗೃಹಗಳು, ಕಣಜಗಳು, ಸ್ನಾನಗೃಹಗಳು, ದೇವಾಲಯಗಳಾಗಿರಬಹುದಾದ ಕಟ್ಟಡಗಳು, ಇವುಗಳು ಪ್ರಾಚೀನ ಕಾಲದ ವಾಸ್ತುಶಿಲ್ಪ ನಿರ್ಮಿತಿಗಳಿಗೆ ಸಾಕ್ಷಿಗಳಾಗಿವೆ.[೧೧] ಭಾರತದ ಚರಿತ್ರೆಯಲ್ಲಿ ದೇಗುಲದ ವಾಸ್ತುರೂಪಗಳು ದೊರೆಯುವುದು ಬೌದ್ಧ ಮತ್ತು ಜೈನ ಧರ್ಮಗಳು ಅಸ್ತಿತ್ವಕ್ಕೆ ಬಂದ ನಂತರ ಈ ಧರ್ಮಗಳಿಗಾಗಿ ಸಂಬಂಧಿಸಿದ ಸ್ತೂಪ ಮತ್ತು ಚೈತ್ಯಗಳು ಆರಂಭದ ಧಾರ್ಮಿಕ ಕಟ್ಟಡ ವಾಸ್ತುವಿಗೆ ಸಾಕ್ಷಿಗಳಾಗಿವೆ. ಸ್ತೂಪವು ಬೌದ್ಧ ಧರ್ಮದ ಒಂದು ಧಾರ್ಮಿಕ ಕಟ್ಟಡ.[೧೨] ಇದನ್ನು ಬೃಹತ್ ಶಿಲಾ ಸಂಸ್ಕೃತಿಯ ಸಮಾಧಿ ಕಲ್ಪನೆಯ ಮುಂದುವರೆದ ಹಂತವಾಗಿರುವುದನ್ನು ಗಮನಿಸಬೇಕು. ಸ್ತೂಪ ಪ್ರಾರಂಭವಾದದ್ದು ಸತ್ತವರ ಶವ ಅಥವಾ ಅಸ್ತಿಗಳ ಮೇಲೆ ನಿರ್ಮಿಸಲಾಗುತ್ತಿದ್ದ ಸಮಾದಿ ದಿಬ್ಬಗಳಿಂದ.[೧೩] ಅಂದರೆ ಸ್ಮಾರಕವಾಗಿ ಭೂಗತ ಮಾಡಿದ ಕಳೆಬರಹದ ಮೇಲೆ ಕಟ್ಟಿದ ಗೋಲಾಕಾರದ ದಿಬ್ಬ. ಈ ಸ್ತೂಪಗಳು ಭಾರತದಲ್ಲಿ ಅಶೋಕನ ಕಾಲಕ್ಕೆ ಹೆಚ್ಚಾಗಿ ನಿರ್ಮಾಣಗೊಂಡಿರುವುದನ್ನು ಕಾಣಬಹುದು.[೧೪] ಸ್ತೂಪದ ಮೂಲ ಉದ್ದೇಶವು ಬುದ್ಧನ ಶಾರೀರಿಕ ಅಸ್ತಿ ಅಥವಾ ಬೌದ್ಧ ಧರ್ಮದ ಉಪಾಧ್ಯಾಯ ಬಿಕ್ಷುಗಳ ಅಸ್ತಿಯನ್ನು ಸ್ಥಾಪಿಸಿ ಇರಿಸುವುದು. ಅಶೋಕನು ಕಳಿಂಗದ ಯುದ್ಧದಲ್ಲಿ ನಡೆದ ರಕ್ತಪಾತವನ್ನು ನೋಡಿ ವಿರಕ್ತಿಯಿಂದ ಬೌದ್ಧಧರ್ಮವನ್ನು ಸ್ವೀಕರಿಸಿದ ತರುವಾಯ ಬೌದ್ಧಧರ್ಮಕ್ಕೆ ಸಂಬಂಧಿಸಿದ ಧಾರ್ಮಿಕ ಕಟ್ಟಡಗಳ ರಚನೆಯನ್ನು ಕೈಗೊಂಡು ಸ್ತಂಭಗಳು, ಸ್ತೂಪಗಳು ಹಾಗೂ ಗುಹಾಲಯಗಳ ನಿರ್ಮಾಣ ಕಾರ್ಯ ಮಾಡಿದನು. ಸಾಂಚಿ ಮತ್ತು ಸಾರನಾಥಗಳಲ್ಲಿ ಈ ಬಗೆಯ ಸ್ತೂಪಗಳನ್ನು ಕಾಣಬಹುದು. ನಾಗಾರ್ಜುನಕೊಂಡ, ಜಗ್ಗಯ್ಯಪೇಟೆ ಘಂಟಸಾಲಗಳಲ್ಲಿ ದಕ್ಷಿಣ ಭಾರತದ ಮುಖ್ಯವಾದ ಸ್ತೂಪಗಳ ಪಳೆಯುಕೆಗಳಿವೆ. ಅದೇ ರೀತಿ ಚೈತ್ಯಾಲಯಗಳು ಸಹ ಬೌದ್ಧರ ಧಾರ್ಮಿಕ ಕಟ್ಟಡಗಳಾಗಿದ್ದವು. ಇವುಗಳನ್ನು ಶಿಲಾಬೆಟ್ಟಗಳನ್ನು ಕೊರೆದು ನಿರ್ಮಿಸಲಾಗುತ್ತಿತ್ತು. ಬುದ್ಧನ ಪ್ರತೀಕವಾಗಿರುವ ಸ್ತೂಪವನ್ನು ಸಭಾಮಂಟಪಗಳಲ್ಲಿಟ್ಟು

ಪೂಜಿಸಲಾಗುತ್ತಿತ್ತು. ಇಂತಹ ಮಂಟಪವನ್ನು ಚೈತ್ಯಗೃಹ ಅಥವಾ ಚೈತ್ಯಾಲಯ ಎನ್ನುತ್ತಾರೆ. ಅಶೋಕನ ಕಾಲದಲ್ಲಿಯೇ ಸ್ತಂಭಗಳೊಂದಿಗಿನ ಚೈತ್ಯಗೃಹಗಳನ್ನು ನಿರ್ಮಿಸಲಾಗಿದೆ.[೧೫] ಚೈತ್ರ್ಯಗೃಹಗಳನ್ನು ಕಲ್ಲುಗುಡ್ಡಗಳನ್ನು ಕೊರೆದು ಅದರಲ್ಲಿಯೇ ಸ್ತೂಪವನ್ನು ರೂಪಿಸಲಾಗುತ್ತಿತ್ತು. ಹೀಗೆ ಕಲ್ಲುಗಳಲ್ಲಿ ಕೊರೆದಿರುವ ಎಂಟು ಚೈತ್ಯಾಗೃಹಗಳು ಬರಾಬರ, ನಾಗಾರ್ಜುನ ಬೆಟ್ಟಗಳಲ್ಲಿ ಹಾಗೂ ರಾಜಗೀರ್ ಬಳಿ ನಿರ್ಮಾಣಗೊಂಡಿವೆ. ಚೈತ್ಯಾಲಯಗಳಂತೆ ಆ ಕಾಲದಲ್ಲಿ ವಿಹಾರಗಳನ್ನು ಕಾಣಬಹುದು. ಕಲ್ಲಿನಲ್ಲಿ ಕೊರೆದು ಮಾಡುವ ವಿಹಾರಗಳ ರಚನೆಯ ಈ ಸಂದರ್ಭವನ್ನು ಶಿಲ್ಪ ವಿನ್ಯಾಸ, ಭಾರತೀಯ ಕಟ್ಟಡ ನಿರ್ಮಾಣ ವಿಜ್ಞಾನಕ್ಕೆ ಹೊಸ ಆಯಾಮವನ್ನು ಒದಗಿಸಿತು ಎಂದು ಹೇಳಬಹುದು. ಕಲ್ಲಿನಲ್ಲಿ ಕೊರೆದು ನಿರ್ಮಿಸುವ ಚೈತ್ಯಾಗೃಹ ವಿಹಾರ. ಗುಹಾಂತರ ದೇವಾಲಯಗಳಿಗೆ ಇದೇ ಉಗಮವಾಯಿತು. ಭಾರತೀಯ ಶಿಲ್ಪಕಲೆಗೆ ಇದೊಂದು ಅಪೂರ್ವವಾದ ಕಾಂತಿಯನ್ನು ತಂದುಕೊಟ್ಟಿತು. ಈ ಕಲೆಯ ನಮೂನೆಗಳು ಆಂಧ್ರಪ್ರದೇಶ, ಗುಜರಾತಿನ ಕಾಠೇವಾಡ, ದಖ್ಖನ್ ಪ್ರಸ್ಥಭೂಮಿಯ ಚಾಲೀಸ್‌ಗಾವ್‌ನಿಂದ ಕರಾಡ್ ತನಕ ಹಾಗೂ ಮುಖ್ಯವಾಗಿ ಪಶ್ಚಿಮ ಘಟ್ಟಗಳಲ್ಲಿ ಅಸಂಖ್ಯಾತವಾಗಿ ಇವು ಕಾಣಸಿಗುತ್ತವೆ.[೧೬] ಹೀಗೆ ಸ್ತೂಪ ಚೈತ್ಯಗಳು ಮತ್ತು ವಿಹಾರಗಳು ಪಾಚೀನ 'ದೇಗುಲ ವಾಸ್ತು' ರೂಪವನ್ನು ಕುರಿತು ಮಾಹಿತಿ ನೀಡುತ್ತವೆ.

ಗುಪ್ತರ ಕಾಲದಲ್ಲಿ ದೇವಾಲಯಗಳ ನಿರ್ಮಾಣದಲ್ಲಿ ಹೊಸ ರಚನೆಗಳು ನಡೆಯತೊಡಗಿದವು. ಇಟ್ಟಿಗೆ ಮತ್ತು ಕಲ್ಲನ್ನು ಬಳಸಿ ದೇವಾಲಯವನ್ನು ನಿರ್ಮಾಣ ಮಾಡುವ ರೂಢಿ ಗುಪ್ತರ ಕಾಲದಲ್ಲಿ ಪ್ರಾರಂಭವಾಯಿತು. ನಾಲ್ಕನೆಯ ಶತಮಾನದ ಪ್ರಾರಂಭದ ಮೊದಲ ಕಾಲುಭಾಗದಲ್ಲಿ ದೇವಾಲಯ ಕಟ್ಟಡ ನಿರ್ಮಾಣ ಪ್ರಾರಂಭವಾಯಿತು. ಕಟ್ಟಡ ರಚನಾ ಶಿಲ್ಪದಲ್ಲಿ ಕಲ್ಲನ್ನು ನಿಖರವಾದ ಉದ್ದ–ಅಗಲಕ್ಕೆ ತಂದು ಅದನ್ನು ನಯಗೊಳಿಸಿ ಕಟ್ಟಡಕ್ಕೆ ಬಳಸುವ ರೂಡಿ ಪ್ರಾರಂಭವಾದದ್ದು ಈ ಕಾಲದಲ್ಲಿಯೇ ರಚನೆಯಲ್ಲಿ ಮರದ ಬಳಕೆಯನ್ನು ಅನುಸರಿಸದೇ ಇಟ್ಟಿಗೆ ಕಲ್ಲನ್ನು ಬಳಸಿ ಕಟ್ಟಡ ರಚನೆಯನ್ನು ಪ್ರಾರಂಭಿಸಲಾಯಿತು. ಆದ್ದರಿಂದ ಗುಪ್ತರ ಕಾಲದ ದೇವಾಲಯಗಳು ವಿವಿಧ ರೀತಿಯ ರೂಪುಗಳನ್ನು ತೋರುತ್ತವೆ. ಇದರ ಫಲವಾಗಿ ದೇವಾಲಯ ನಿರ್ಮಾಣದಲ್ಲಿ ಸೃಜನಾತ್ಮಕ ಪ್ರಯೋಗ ಶೀಲತೆ ಮೈಗೂಡಿಸಿಕೊಂಡು ಅಭಿವೃದ್ಧಿಯನ್ನು ಗಳಿಸಿತು.[೧೭] ಕಟ್ಟಡ ರಚನೆ, ಮೂರ್ತಿಶಿಲ್ಪ ಮತ್ತು ಚಿತ್ರಗಳಲ್ಲಿ ಸೌಂದರ್ಯ, ತತ್ವಗಳನ್ನು ಕಂಡುಕೊಂಡು ಅವನ್ನು ಸೂತ್ರೀಕರಿಸಿದ್ದು ಗುಪ್ತರ ಕಾಲದಲ್ಲಿ ಎಂಬುದು ವಿಮರ್ಶಕರ ಅಭಿಮತ.[೧೮] ಗುಪ್ತರ ಕಾಲಕ್ಕೂ ಮೊದಲು ಮೌರ್ಯರ ಕಾಲದಲ್ಲಿ ತೀರಾ ಸಾಧಾರಣವಾದ ದೇವಾಲಯವನ್ನು ನಿರ್ಮಿಸಲಾಗುತ್ತಿತ್ತು. ದೇವಾಲಯಗಳ ನಿರ್ಮಾಣದ ಕಲೆ ಗಮನಾರ್ಹವಾದ ರೀತಿಯಲ್ಲಿ ವಿಕಾಸವನ್ನು ಪಡೆದ ಕಾಲ ಗುಪ್ತರಕಾಲ. ದೇವಾಲಯದ ಪ್ರಮುಖವದ ಅಂಶಗಳೆಲ್ಲವೂ ಬೆಳೆದುದದನ್ನು ಕಾಣಬಹುದು. ಗುಪ್ತರ ಕಾಲದ ಮುಖ್ಯ ದೇವಾಲಯಗಳಲ್ಲಿ ಶಿವ ದೇವಾಲಯ, ನಾಚ್ನಾದ ಪಾರ್ವತಿ ದೇವಾಲಯ, ಜಬ್ಬಲ್‌ಪುರದ ವಿಷ್ಣು, ಕಾಳಿಕಾದೇವಿ ದೇವಾಲಯಗಳು ಬಹುಮುಖ್ಯವಾಗಿವೆ.[೧೯] "ಗುಪ್ತ ಸಾಮ್ರಾಜ್ಯದ ಪತನದ ನಂತರ ಶತಮಾನಗಳಲ್ಲಿ ದೇವಾಲಯ

ನಿರ್ಮಾಣ ಶೈಲಿಯಲ್ಲಿ ಅಪಾರವಾದ ಪ್ರಗತಿ ಮತ್ತು ಬದಲಾವಣೆಗಳನ್ನು ಮೈಗೂಡಿಸಿಕೊಂಡಿತು. ಭಾರತೀಯ ಶಿಲ್ಪಶಾಸ್ತ್ರಗಳು ದೇವಾಲಯಗಳನ್ನು ನಾಗರ, ವೇಸರ ಮತ್ತು ದ್ರಾವಿಡಗಳೆಂದು ವಿಭಜಿಸುತ್ತವೆ. ಉತ್ತರ ಭಾರತೀಯ ದೇವಾಲಯಗಳು ಬಹುಪಾಲು ನಾಗರ ಶೈಲಿಗೆ ಸೇರಿವೆ. ಆದರೆ ಈ ರೀತಿಯಾಗಿ ಸುಲಭವಾಗಿ ಮತ್ತು ನಿಖರವಾಗಿ ಭೌಗೋಳಿಕ ಸೀಮೆಗಳನ್ನು ಅನುಸರಿಸಿ ದೇವಾಲಯಗಳ ಬಗೆಗಳನ್ನು ವರ್ಗೀಕರಿಸಲು ಸಾಧ್ಯವಾಗುವುದಿಲ್ಲ. ನಾಗರಶೈಲಿಯ ದೇವಾಲಯಗಳು ದಕ್ಷಿಣ ಭಾರತದಲ್ಲೂ ಕಂಡು ಬರುತ್ತವೆ. ಆದ್ದರಿಂದ ಭಾರತೀಯ ದೇವಾಲಯ ಪರಂಪರೆಯಲ್ಲಿ ಔತ್ತರೇಯ ದಖ್ಖನಿ ಹಾಗೂ ದಾಕ್ಷಿಣಾತ್ಯ ದ್ರಾವಿಡ ದೇವಾಲಯಗಳೆಂದು ವರ್ಗೀಕರಿಸಿಕೊಳ್ಳಲಾಗಿದೆ.[೨೦]

"ವಾಸ್ತುಶಿಲ್ಪದಲ್ಲಿ ಕರ್ನಾಟಕದಲ್ಲಿರುವಷ್ಟು ವೈವಿಧ್ಯ ಬಹುಶಃ ಭರತಖಂಡದ ಇನ್ನಾವ ಭಾಗದಲ್ಲೂ ಇಲ್ಲವೆನ್ನಬಹುದು. ದೇವಾಲಯಗಳ ನಿರ್ಮಾಣದಲ್ಲಿ ತೋರಿಸಿದ ಉದಾತ್ತವಾದ ಅಭಿರುಚಿ ಮತ್ತು ಅದನ್ನು ಬಳಸಿಕೊಂಡು ಬಂದ ಬಗೆ ವಿಶಿಷ್ಟವಾದುದು. ಭರತ ಖಂಡದ ಎಲ್ಲಾ ಭಾಗಗಳ ಉತ್ತಮ ಅಂಶಗಳನ್ನೂ ತನ್ನಲ್ಲಿ ಅಳವಡಿಸಿಕೊಳ್ಳಲು ಕರ್ನಾಟಕ ಪ್ರಯತ್ನ ಪಟ್ಟಿದೆ. ಅವುಗಳ ಸಮನ್ವಯದಿಂದ ತನ್ನದೇ ಆದ ಮಾರ್ಗವನ್ನು ರೂಪಿಸಿಕೊಂಡಿದೆ.[೨೧] ದಖ್ಖನಿ ಹಾಗೂ ದಾಕ್ಷಿಣಾತ್ಯ ದ್ರಾವಿಡ ಶೈಲಿಯ ದೇವಾಲಯಗಳ ವಾಸ್ತುಶೈಲಿಯ ಅಂಶಗಳನ್ನು ಕರ್ನಾಟಕದಲ್ಲಿ ಕಾಣಬಹುದು. ಕರ್ನಾಟಕದ ದೇವಾಲಯಗಳ ವಾಸ್ತು ಶಿಲ್ಪವನ್ನು ಪ್ರಧಾನವಾಗಿ ನಾಲ್ಕು ಘಟ್ಟಗಳಾಗಿ ವಿಭಾಗಿಸಬಹುದು. ಅವುಗಳೆಂದರೆ:-

೧. ಚಾಲುಕ್ಯ ಪೂರ್ವಯುಗ
೨. ಚಾಲುಕ್ಯ ಯುಗ
೩. ಹೊಯ್ಸಳ ಯುಗ
೪. ವಿಜಯನಗರ ಕಾಲ

**೧. ಚಾಲುಕ್ಯ ಪೂರ್ವಯುಗ**

ಚಾಲುಕ್ಯ ಪೂರ್ವ ಯುಗದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಮೌರ್ಯ ಮತ್ತು ಶಾತವಾಹನ ಕಾಲದ ಹಲವು ನಿವೇಶನಗಳು ಉತ್ಖನನದಿಂದ ಬೆಳಕಿಗೆ ಬಂದಿದ್ದು ಆ ನೆಲೆಗಳಲ್ಲಿನ ಕಟ್ಟಡ ಅವಶೇಷಗಳು ಸ್ತೂಪ ಚೈತ್ಯಗಳು ಬೃಹತ್ ಶಿಲಾಗೋರಿಗಳು. ಈ ವಿಧವಾದ ಅವಶೇಷಗಳು ಕರ್ನಾಟಕದಲ್ಲಿ ದೇವಾಲಯಗಳ ಹುಟ್ಟನ್ನು ಕುರಿತು ಹೇಳುತ್ತವೆ. ಬ್ರಹ್ಮಗಿರಿ, ಚಂದ್ರವಳ್ಳಿ ಬನವಾಸಿ, ಪಟ್ಟದಕಲ್ಲು, ಐಹೊಳೆ ಹಾಗೂ ಇತ್ತೀಚೆಗೆ ಉತ್ಖನನಗೊಂಡ ಸನ್ನತಿಗಳಲ್ಲಿ ಪ್ರಾಚೀನ ಕಟ್ಟಡದ ಅವಶೇಷಗಳು ದೊರೆತಿವೆ.[೨೨] ಸನ್ನತಿಯ ಉತ್ಖನನದಲ್ಲಿ ಒಂದು ಭವ್ಯವಾದ ಸ್ತೂಪದ ಅವಶೇಷ ದೊರೆತಿದ್ದು ಗಾತ್ರದಲ್ಲಿ ಚಿಕ್ಕದಿದ್ದು ಅದರ ಹೊರಮೈ ಉಬ್ಬುಶಿಲ್ಪದ ಶಿಲ್ಪಗಳಿಂದ ಕೂಡಿದೆ. ಉಬ್ಬುಶಿಲ್ಪದಲ್ಲಿ ಭೋದಿವೃಕ್ಷ, ವಜ್ರಾಸನ ಮತ್ತು ಪಾದಗಳನ್ನು ಕೆತ್ತಲಾಗಿದ್ದು, ಅವು ಬುದ್ಧನನ್ನು ಸಂಕೇತಿಸುತ್ತವೆ.[೨೩]

ಶಾತವಾಹನರ ಮತ್ತು ಅವರ ನಂತರದ ಕಾಲದ ಶಾಸನಗಳಲ್ಲಿ ಕೆಲವು ವೈಧಿಕ ಸಂಪ್ರದಾಯದ ದೇವಾಲಯಗಳ ಉಲ್ಲೇಖಗಳು ಬರುತ್ತವೆ. ಶಿವಸ್ಕಂದವರ್ಮನ ಮಳವಳ್ಳಿ ಶಾಸನ ಮತ್ತು ಪಟ್ಟದೇವರನ್ನು ಕದಂಬರ ತಾಳಗುಂದ ಸ್ತಂಭಶಾಸನ ಶಾತಕರಣಿಗಳಿಂದ ಪೂಜಿತ ಪ್ರಣವೇಶ್ವರ ದೇವಾಲಯವನ್ನು ಉಲ್ಲೇಖಿಸುತ್ತಿದೆ.[೨೪] ಮೇಲಿನ ಈ ಉಲ್ಲೇಖಗಳು ಕರ್ನಾಟಕದಲ್ಲಿ ಶಾತವಾಹನರ ಕಾಲದ ದೇವಾಲಯಗಳ ವಿಕಾಸದ ಅಂಸಗಳನ್ನು ಕುರಿತಯ ಹೇಳುತ್ತವೆ. ಶಾತವಾಹನರ ನಂತರದಲ್ಲಿ ಕರ್ನಾಟಕದಲ್ಲಿ ಕದಂಬರ ಕಾಲದಲ್ಲಿ ದೇವಾಲಯಗಳ ಬೆಳವಣಿಗೆಯನ್ನು ಕಾಣಬಹುದು. ಕದಂಬರ ಕ್ರಿ.ಶ. ೪ನೇಯ ಶತಮಾನದಿಂದ ೬ನೇಯ ಶತಮಾನದವರೆಗೆ ಆಳ್ವಿಕೆ ನಡೆಸಿದ್ದಾರೆ. ಕರ್ನಾಟಕದಲ್ಲಿ ಕದಂಬರ ಕಾಲಕ್ಕೆ ಶಿಲಾವಾಸ್ತುವಿನ ಪ್ರಮುಖ ಸಾಕ್ಷ್ಯಗಳು ದೊರಕುತ್ತವೆ. ಕದಂಬರ ಕಾಲದ ದೇಗುಲ ವಾಸ್ತುಶಿಲ್ಪವನ್ನು ಎರಡು ಭಾಗಗಳಾಗಿ ನೋಡಬಹುದು.

ಅವುಗಳೆಂದರೆ:–

೧. ಕೊರೆದ ಗುಹಾಲಯ

೨. ಕಟ್ಟಿದ ದೇವಾಲಯ ವಾಸ್ತುಶಿಲ್ಪ[೨೫]

ಕದಂಬರ ಕಾಲದ ಗುಹಾಲಯಗಳೆಂದು ಹೇಳಲ್ಪಡುವ ನೋರ್ವಾ ಲಂಪಗಾವ್ ಇತ್ಯಾದಿ ಸ್ಥಳಗಳಲ್ಲಿ ಜಾಂಬುಟ್ಟಿಗೆ (Lakerite) ಬಂಡೆಗಳಲ್ಲಿ ಇವುಗಳನ್ನು ನಿರ್ಮಿಸಿದ್ದು ಇಲ್ಲಿನ ಮೂರ್ತಿಶಿಲ್ಪಗಳು ಶಾಸನ ಲಿಪಿ ಮುಂತಾದ ಆಧಾರಗಳಿಂದ ಅವು ಕದಂಬ ಶೈಲಿಯೆಂದು ವಿದ್ವಾಂಸರ ಅಭಿಮತ.[೨೬] ಇವರ ಕಾಲದಲ್ಲಿ ಕಟ್ಟಿದ ದೇವಾಲಯಗಳಲ್ಲಿ ಹಲಸಿಯ ಜೈನಬಸ್ತಿ ಪ್ರಾಚೀನ ಕಾಲದ್ದಾಗಿದ್ದು. ಇದು ಕ್ರಿ.ಶ. ೫ನೇ ಶತಮಾನದಲ್ಲಿದ್ದ ಮೃಗೇಶರ್ಮನಿಂದ ನಿರ್ಮಾಣಗೊಂಡಿದೆ. ಇದು ಗರ್ಭಗೃಹ, ಸುಖನಾಸಿ ಮತ್ತು ಚಿಕ್ಕ ಮಂಟಪ ಇವುಗಳಿಂದ ಕೂಡಿದೆ.[೨೭] ಹಲಸಿಯಲ್ಲಿರುವ ಹಟ್ಟಕೇಶ್ವರ, ಕಲ್ಲೇಶ್ವರ, ಸುವರ್ಣೇಶ್ವರ, ನರಸಿಂಹ, ಮೊದಲಾದ ದೇವಾಲಯಗಳು ಕದಂಬ ಶೈಲಿಯ ದ್ಯೋತಕಗಳಾಗಿ ನಿಂತಿವೆ. ತಾಳಗುಂದದ ಪ್ರಣವೇಶ್ವರ ದೇವಾಲಯ ಅಚ್ಚುಕಟ್ಟಾಗಿ ಕತ್ತರಿಸಿದ ಕಲ್ಲುಗಳು ಕಟ್ಟಡದ ರೀತಿ ಕೆತ್ತನೆಯಕೆಲಸ ಇವುಗಳಲ್ಲಿಯೂ ಇದು ಹಲಸಿಯ ಬಸ್ತಿಗಿಂತ ಮುಂದಿನ ಹೆಜ್ಜೆಯನ್ನು ತೋರಿಸುತ್ತದೆ ಹಾಗೂ ಬನವಾಸಿಯ ಮಧುಕೇಶ್ವರ ದೇವಾಲಯವು ಇವರ ಕಾಲದ ಬಹುಮುಖ್ಯ ದೇವಾಲಯವಾಗಿದೆ.[೨೮]

**೨. ಚಾಲುಕ್ಯಯುಗ**

ಉತ್ತರ ಭಾರತದಲ್ಲಿ ಗುಪ್ತರ ಪೋಷಣೆಯಲ್ಲಿ ದೇವಾಲಯಗಳ ನಿರ್ಮಾಣ ನಡೆಯುತ್ತಿರುವ ಕಾಲದಲ್ಲಿಯೇ ದಕ್ಷಿಣದಲ್ಲಿ ಒಂದು ಹೊಸ ಪರಂಪರೆ ಪ್ರಾರಂಭವಾಯಿತು. ಚಾಲುಕ್ಯರ ನೇತೃತ್ವದಲ್ಲಿ ಕರ್ನಾಟಕ ಆ ಮುನ್ನಡೆಯ ಕೇಂದ್ರವಾಯಿತು.[೨೯] ಚಾಲುಕ್ಯರಲ್ಲಿ ಮೂರು ಶಾಖೆಗಳುಂಟು. ಬಾದಾಮಿಯ ಚಾಲುಕ್ಯರು, ಕಲ್ಯಾಣ ಚಾಲುಕ್ಯರು, ವೆಂಗಿ ಚಾಲುಕ್ಯರು. ಅಖಂಡ ಕರ್ನಾಟಕದ ಪ್ರಪ್ರಥಮ

ಚಕ್ರವರ್ತಿಗಳಾಗಿ ಬಾದಾಮಿಯ ಚಾಲುಕ್ಯರು ಇನ್ನೂರು ವರ್ಷಗಳ ಕಾಲ (ಕ್ರಿ.ಶ. ೫೪೩–ಕ್ರಿ.ಶ/೭೫೩) ವೈಭವದಿಂದ ಆಳಿದರು. ಕರ್ನಾಟಕದ ವಾಸ್ತುಶಿಲ್ಪ ಶೈಲಿಯಲ್ಲಿ ಅನೇಕ ಬಗೆಯ ಪ್ರಯೋಗಗಳನ್ನು ನಡೆಸಿದ ಅವಧಿಯಿಂದರೆ ಬಾದಾಮಿ ಚಾಲುಕ್ಯ ಮನೆತನದ ಆಳ್ವಿಕೆಯ ಕಾಲ. ಇವರನ್ನು ಕರ್ನಾಟಕದ ವಿಶಿಷ್ಟ ವಸ್ತುಸೈಲಿಯ ಆದ್ಯ ಪ್ರವರ್ತಕರೆಂದು ಕರೆಯಲಾಗಿದೆ. ಬಾದಾಮಿ ಚಾಲುಕ್ಯರ ಕಾಲದ ಶಿಲಾದೇಗುಲಗಳು ವಿಪುಲವಾಗಿವೆ. ಇವರ ಕಾಲದ ಕಟ್ಟಡ ರಚನೆಗಳು ಪಟ್ಟದಕಲ್ಲು. ಐಹೊಳೆ ಮಹಾಕೂಟಗಳೇ ಅಲ್ಲದೇ ಪ್ರಸ್ತುತ ಆಂಧ್ರಪ್ರದೇಶದ ಆಲಂಪುರ ಮಹಾನಂದಿಗಳಲ್ಲೂ ವ್ಯಾಪಿಸಿದೆ.

ಕ್ರಿ.ಶ. ೬–೮ನೇಯ ಶತಮಾನಗಳಲ್ಲಿ ನಿರ್ಮಾಣಗೊಂಡ ಈ ಸ್ಮಾರಕಗಳು ಭಾರತದ ಉತ್ಕೃಷ್ಟ ದೇವಾಲಯಗಳ ಸಾಲಿಗೆ ಸೇರಿವೆ. ಈ ದೇವಾಲಯಗಳಲ್ಲಿ ಕಂಡು ಬರುವ ವಾಸ್ತು ವೈವಿಧ್ಯತೆಗಳು ವಿಸ್ಮಯಕಾರಿಯಾಗಿವೆ. ಚಾಲುಕ್ಯ ವಾಸ್ತುಕಲೆಯು ಭಾರತೀಯ ಕಲಾ ಇತಿಹಾಸದಲ್ಲಿ ಮಹತ್ವದ ಸ್ಥಾನ ಪಡೆದಿದೆ.[೩೦] ಚಾಲುಕ್ಯರ ಕಾಲದ ದೇವಾಲಯ ವಾಸ್ತುವನ್ನು ಎರಡು ಭಾಗಗಳಾಗಿ ನೋಡಬಹುದು ಅವು ೧. ಗುಹಾದೇವಾಲಯಗಳು ೨. ರಾಚನಿಕ ದೇವಾಲಗಳು. ಚಾಲುಕ್ಯ ರೂವಾರಿಗಳು ಬಾದಾಮಿ, ಐಹೊಳೆಯಲ್ಲಿ ಒಟ್ಟು ಒಂಬತ್ತು ಗುಹಾದೇವಾಲಯಗಳನ್ನು ಕೊರೆದಿದ್ದಾರೆ.[೩೧] ಬಾದಾಮಿಯಲ್ಲಿರುವ ಚಾಲುಕ್ಯ ಗುಹಾಲಯಗಳು ನಾಲ್ಕು ಇವುಗಳನ್ನು ಬಾದಾಮಿಯ ದಕ್ಷಿಣ ದಿಕ್ಕಿನಲ್ಲಿರುವ ಕೆಂಪು ಉಸುಗು ಕಲ್ಲಿನ ಗುಡ್ಡದಲ್ಲಿ ಕೊರೆಯಲಾಗಿದೆ. ಈ ನಾಲ್ಕು ಗುಹೆಗಳಲ್ಲಿ ಮೊದಲನೆಯದು ಶೈವ. ಅನಂತರದ ಎರಡು ವೈಷ್ಣವ ಕೊನೆಯದು ಜೈನ ಸಂಪ್ರದಾಯಕ್ಕೆ ಸೇರಿದೆ.[೩೨] ಬಾದಾಮಿಯಲ್ಲಿನ ಗುಹಾದೇವಾಲಯಗಳನ್ನು ಸ್ಥಳೀಯರು ಮೇಣದ ಬಸದಿಗಳೆಂದು ಕರೆಯುತ್ತಾರೆ. ಆಯತಾಕಾರದ ಮೊಗಸಾಲೆ, ಹಜಾರ ಮತ್ತು ಮಧ್ಯದಲ್ಲಿ ಗರ್ಭಗುಡಿ ಇದು ಗುಹಾಲಯಗಳ ತಳವಿನ್ಯಾಸ ಅದೇ ರೀತಿ ಬಾದಾಮಿ ಚಾಲುಕ್ಯರ ಕಾಲದ ರಾಚನಿಕ (ಕಟ್ಟಡ) ದೇವಾಲಯಗಳು ಸಹ ಅವರ ಕಾಲದ ಕಲೆ ಮತ್ತು ವಾಸ್ತುಶಿಲ್ಪದ ನಿರ್ಮಿತಿಗಳಾಗಿವೆ. ಅವರ ಕಾಲದಲ್ಲಿ ಐಹೊಳೆ, ಮಹಾಕೂಟ, ಪಟ್ಟದಕಲ್ಲುಗಳಲ್ಲಿ ರಾಚನಿಕ ದೇವಾಲಯಗಳನ್ನು ಕಾಣಬಹುದು. ಚಾಲುಕ್ಯ ಸ್ಥಪತಿಗಳು ವಿಭಿನ್ನ ತಳವಿನ್ಯಾಸವಿರುವ ದೇವಾಲಯಗಳನ್ನು ಸೃಷ್ಟಿಸಿದ್ದಾರೆ. ಬಹುಪಾಲು ದೇವಾಲಯಗಳಿಗೆ ಸರಳವಾದ ತಳವಿನ್ಯಾಸವಿದೆ. ಇವು ಚೌಕಾಕಾರದ ಚಿಕ್ಕಗರ್ಭಗೃಹ, ಸಭಾಮಂಟಪ ಮತ್ತು ಮುಖಮಂಟಪಗಳನ್ನು ಹೊಂದಿದ್ದು, ಪೂಜಾ ವಿಧಿಗಳಿಗೆ ಪೂರಕವಾಗಿವೆ. ಮಹಾಕೂಟದ ಬಾಣಂತಿಗುಡಿ, ಐಹೊಳೆಯ ಸೂರ್ಯ ದೇವಾಲಯ ಈ ಬಗೆಯ ವಿನ್ಯಾಸದಲ್ಲಿ ರಚಿತವಾಗಿದೆ. ಪ್ರದಕ್ಷಿಣಾ ಪಥವಿಲ್ಲದ ದೇವಾಲಯಗಳನ್ನು ನಿರಂಧರ ಮಂದಿರಗಳೆಂದು ಕರೆಯಲಾಗುತ್ತದೆ.[೩೩] ಪ್ರದಕ್ಷಿಣಾ ಪಥವಿರುವ ದೇವಾಲಯಗಳನ್ನು ಸಾಂಧಾರವೆಂದು ಗುರುತಿಸಲಾಗುತ್ತದೆ. ದೇವತಾ ಶಿಲ್ಪವನ್ನು ಸುತ್ತು ಹಾಕಲು ಸಾಧ್ಯವಾಗುವಂತೆ ಗರ್ಭಗುಡಿಯ ಸುತ್ತ ಪ್ರದಕ್ಷಣಾ ಪಥವನ್ನು ನಿರ್ಮಿಸಲಾಗಿರುತ್ತದೆ. ಐಹೊಳೆಯ ಹುಚ್ಚಮಲ್ಲಿಗುಡಿ. ಪಟ್ಟದಕಲ್ಲಿನ ಸಂಗಮೇಶ್ವರ, ಮಹಾಕೂಟದ ಮಲ್ಲಿಕಾರ್ಜುನ ಗುಡಿಗಳನ್ನು ಹೆಸರಿಸಬಹುದು. ಐಹೊಳೆಯ ಲಾಡ್‌ಖಾನ್ ಗುಡಿಯ ತಲವಿನ್ಯಾಸ ಇನ್ನೊಂದು ಬಗೆಯದು. ಗರ್ಭಗೃಹವು ಸಭಾಮಂಟಪದ ಭಾಗವಾಗಿದ್ದು, ಅವೆರಡರ ಹಿಂದೆ

ಗೋಡೆ ಒಂದೇ ಆಗಿದೆ. ಬಾದಾಮಿ ಚಾಲುಕ್ಯರು ಅವರ ಕಾಲದ ದೇವಾಲಯಗಳ ನಿರ್ಮಾಣಕ್ಕಾಗಿ ಸ್ಥಳೀಯವಾಗಿ ದೊರೆಯುವ ನಯವಾದ ನಸುಗೆಂಪು ಅಥವಾ ತಿಳಿ ಹಳದಿ ಬಣ್ಣದ ಮರಳು ಕಲ್ಲನ್ನೇ ಹೆಚ್ಚಾಗಿ ಬಳಸಿದ್ದಾರೆ.[೩೪] ಹೀಗೆ ಬಾದಾಮಿ ಚಾಲುಕ್ಯರ ಕಾಲದ ದೇವಾಲಯಗಳ ನಿರ್ಮಿತಿಗಳ ಹಲವು ವಾಸ್ತುಶೈಲಿ ವಿಷಯಗಳನ್ನು ತಿಳಿಯಬಹುದು.

ಬಾದಾಮಿ ಚಾಲುಕ್ಯರಿಂದ ಪ್ರಾರಂಭವಾದ ಚಾಲುಕ್ಯ ವಾಸ್ತುಶೈಲಿಯ ನಿರ್ಮಾಣ ಚಟುವಟಿಕೆಯು ಅವರ ವಂಶಜರೆ ಆದ ಕಲ್ಯಾಣ ಚಾಲುಕ್ಯರ (೧೦-೧೨ನೆಯ ಶತಮಾನ) ಆಡಳಿತ ಕಾಲದಲ್ಲೂ ಮುಂದುವರೆಯಿತು. ಇದು ಬಾದಾಮಿ ಚಾಲುಕ್ಯರ ವಾಸ್ತು ಸಂಪ್ರದಾಯದ ವಿಕಾಸವೇ ಆದರೂ ಅದು ಸಂಪೂರ್ಣವಾಗಿ ವಿಕಾಸ ಹೊಂದುವ ವೇಳೆಗೆ ಅನೇಕ ಪ್ರಮುಖ ಬದಲಾವಣೆಗಳಿಗೊಳಗಾಗಿ ತನ್ನ ತನವನ್ನೇ ಸಾಧಿಸಿಕೊಂಡಿತು. ಕಲ್ಯಾಣ ಚಾಲುಕ್ಯರು ಕಪ್ಪು ಮಿಶ್ರಿತ ನೀಲಿ ಛಾಯೆಯ ಬಳಪದ ಕಲ್ಲನ್ನು (ಕ್ಲೋರೈಟಿಕ್ ಸಿಸ್ಟ್) ದೇವಾಲಯಗಳ ನಿರ್ಮಾಣಕ್ಕೆ ಬಳಸಿದುದನ್ನು ಕಾಣಬಹುದು.[೩೫] ಕರ್ನಾಟಕದಲ್ಲಿ ದೇವಾಲಯಗಳ ನಿರ್ಮಾಣದ ಇತಿಹಾಸದಲ್ಲಿ ಕಲ್ಯಾಣದ ಚಾಲುಕ್ಯರ ಕಾಲ ಅಪೂರ್ವವಾದುದು. ಹೊಸದಾದ ವಿಶಿಷ್ಟ ಶೈಲಿಯೊಂದನ್ನು ಇವರು ಆರಂಭಿಸಿದರು. ಮುಂದೆ ಹೊಯ್ಸಳರು ಈ ಶೈಲಿಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ ಮುಂದುವರೆಸಿದರು. ವಿಸ್ತಾರವಾದ ಪ್ರದೇಶವನ್ನಾಳಿದ ಕಲ್ಯಾಣದ ಚಾಲಯಕ್ಯರ ಕಾಲದಲ್ಲಿ ವಿಪುಲ ಸಂಖ್ಯೆಯ ದೇವಾಲಯಗಳು ನಿರ್ಮಿತವಾದವು. ಕಲ್ಯಾಣ ಚಾಲುಕ್ಯರ ದೇವಾಲಯಗಳನ್ನು ಔರಂಗಾಬಾದದ ಕೊಡದಿಂದ ತುಮಕೂರು ಜಿಲ್ಲೆಯ ಅರಳಗುಪ್ಪೆಯವರೆಗೆ ಕೊಲ್ಲಾಪುರದಿಂದ ಮಹಬೂಬನಗರ ಜಿಲ್ಲೆಯ ಪಾನಗಲ್ಲುವರೆಗೆ ಹಬ್ಬಿರುವುದನ್ನು ಕಾಣಬಹುದು. ಆದರೂ ಇವರ ವಾಸ್ತು ಶೈಲಿಯನ್ನು ನಿರೂಪಿಸುವ ಬಹು ಸಂಖ್ಯೆಯ ದೇವಾಲಯಗಳು ಬಳ್ಳಾರಿ, ಧಾರವಾಡ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿವೆ. ಇವುಗಳನ್ನು ಹೆಚ್ಚಾಗಿ ತುಂಗಭದ್ರನದಿಯ ಎರಡು ದಂಡೆಯ ಸುತ್ತಮುತ್ತ ಕಟ್ಟಲಾಗಿದೆ.[೩೬] ಕಲ್ಯಾಣ ಚಾಲುಕ್ಯರ ಹೆಚ್ಚಿನ ದೇವಾಲಯಗಳು ನಿರಂಧಾರ ಪ್ರಕಾರದವುಗಳು.[೩೭] ಇವುಗಳಲ್ಲಿ ಏಕಕೂಟ ದೇವಾಲಯಗಳೇ ಅಧಿಕ. ಕಲ್ಯಾಣ ಚಾಲುಕ್ಯರ ದೇವಾಲಯಗಳ ಅಧಿಷ್ಠಾನದ ಎತ್ತರವು ದೇವಾಲಯದಿಂದ ದೇವಾಲಯಕ್ಕೆ ಬೇರೆಯಾಗಿರುತ್ತದೆ. ಅದು ಸಾಮಾನ್ಯವಾಗಿ ಮೂರರಿಂದ ಐದು ಅಡಿಗಳ ಎತ್ತರವುಳ್ಳದಾಗಿರುತ್ತದೆ. ಅಧಿಷ್ಠಾನದಲ್ಲಿ ಉಪಾನ, ಜಗತಿ, ಕಂಪ, ಕಂಠ ಮತ್ತು ಪಟ್ಟಿಕೆಗಳು ಹೆಚ್ಚು ಎದ್ದು ಕಾಣುತ್ತವೆ. ಅನೇಕ ಸಲ ಎಲ್ಲಕ್ಕೂ ಮೇಲಿನ ಭಾಗವನ್ನು ಚೌಕಾಕಾರ. ದೀರ್ಘಚತುರಸ್ರಾಕಾರ ಮತ್ತು ಶಿಲುಬೆಯಾಕಾರದ ಅಲಂಕಾರಗಳಿಂದ ಅಲಂಕರಿಸಿರುವುದನ್ನು ಕಾಣಬಹುದು. ಕೆಲವು ಸಂದರ್ಭಗಳಲ್ಲಿ ಮಕರದ ತಲೆ. ಕೀರ್ತಿಮುಖ. ಮನುಷ್ಯ ಮತ್ತು ದೇವತಾ ಪುರುಷರ ಚಿಕ್ಕ-ಚಿಕ್ಕ ಶಿಲ್ಪಗಳನ್ನು ಇವುಗಳಲ್ಲಿ ಕೆತ್ತಿರುವುದು ಕಂಡು ಬರುತ್ತದೆ.[೩೮] ಕಲ್ಯಾಣ ಚಾಲುಕ್ಯರ ದೇವಾಲಯಗಳಲ್ಲಿ ಕಂಡು ಬರುವ ಜಾಲಂದ್ರಗಳು ವೈಶಿಷ್ಟ್ಯಪೂರ್ಣವಾಗಿರುತ್ತವೆ. ಈ ದೇವಾಲಯಗಳಲ್ಲಿ ಜಾಲಂದ್ರಗಳನ್ನು ಸಾಮಾನ್ಯವಾಗಿ ದ್ವಾರಗಳ ಎರಡೂ ಬದಿಗೆ ಅಳವಡಿಸಿರುತ್ತಾರೆ. ಪ್ರವೇಶದ್ವಾರ, ಸುಕುನಾಸಿದ್ವಾರ ಮತ್ತು ಗರ್ಭಗೃಹದ್ವಾರಗಳ

ಇಕ್ಕೆಲಗಳಲ್ಲಿ ಇಂತಹ ಜಾಲಂದ್ರಗಳನ್ನು ಕಾಣಬಹುದು.[೩೯] ಉಣಕಲ್ಲಿನ ಚಂದ್ರಮೌಳೇಶ್ವರ ಮತ್ತು ಬಳ್ಳಿಗಾವಿಯ ತ್ರಿಪುರಾಂತಕೇಶ್ವರ ದೇವಾಲಯದ ಅಲಂಕಾರಿಕ ಜಾಲಂದ್ರಗಳು ಆಕರ್ಷಕವಾಗಿವೆ.ಇವರ ಕಾಲದ ದೇವಾಲಯಗಳ ದ್ವಾರಗಳಲ್ಲಿ ಹೆಚ್ಚು ಅಲಂಕೃತವಾಗಿರುವ ದ್ವಾರ ಶಾಖೆಗಳಿರುತ್ತವೆ. ಐದು ಅಥವಾ ಅದಕ್ಕೂ ಹೆಚ್ಚು ದ್ವಾರ ಶಾಖೆಗಳಿರುತ್ತವೆ. ಕಲ್ಯಾಣ ಚಾಲುಕ್ಯರ ದೇವಾಲಯಗಳ ಇನ್ನೊಂದು ಗಮನಾರ್ಹ ಲಕ್ಷಣವೆಂದರೆ ಕಂಬಗಳ ವಿನ್ಯಾಸ ಮತ್ತು ಅವುಗಳನ್ನು ಕೆತ್ತುವಿಕೆ ಸಾಮಾನ್ಯವಾಗಿ ಎರಡು ಪ್ರಕಾರದ ಕಂಬಗಳು ಇಲ್ಲಿ ಕಂಡು ಬರುತ್ತವೆ. ಮೊದಲನೆಯ ವಿಧದ ಕಂಬ ಕಾಂಡಭಾಗದಲ್ಲಿ ಚಚ್ಚೌಕಾಕಾರವಾಗಿದ್ದು ಅಷ್ಟಪೈಲು ಮತ್ತು ಹದಿನಾರು ಭಾಗಗಳುಳ್ಳದಾಗಿರುತ್ತದೆ. ಎರಡನೇ ಪ್ರಕಾರದ ಕಂಬ ಗಂಟೆಯಾಕಾರದಾಗಿರುತ್ತದೆ. ಕಂಬಗಳನ್ನು ಒಂದು ಚಿಕ್ಕದಾದ ಚಚ್ಚೌಕ ಪೀಠಗಳ ಮೇಲೆ ನಿಲ್ಲಿಸಲಾಗಿರುವುದನ್ನು ಇಲ್ಲಿ ಸಾಮಾನ್ಯವಾಗಿ ಕಾಣುತ್ತೇವೆ.[೪೦] ಈ ಕಾಲದ ದೇಗುಲಗಳು ದ್ರಾವಿಡ ಮತ್ತು ನಾಗರ ಶೈಲಿಗಳ ಸಮ್ಮಿಲನವಾಗಿ ಸಂಕರಣ ಶೈಲಿಯಾದ ವೇಸರ ಶೈಲಿಯಲ್ಲಿ ನಿರ್ಮಾಣವಾಗಿವೆ. ಹಸಿರು ಮಿಶ್ರಿತ ಶಿಲೆಯ ಜೊತೆಗೆ ಕರ್ನಾಟಕದ ವಿವಿದೆಡೆ ಕಣಶಿಲೆಯನ್ನು ದೇವಾಲಯಗಳ ನಿರ್ಮಾಣಕ್ಕೆ ಬಳಸಿರುವುದು ಕಾರಣವಾಗಿದೆ. ಕಲ್ಯಾಣ ಚಾಲುಕ್ಯರ ಕಾಲದ ಪ್ರಮುಖ ದೇವಾಲಯಗಳೆಂದರೆ, ಇಟಗಿಯ ಮಹದೇವ ದೇವಾಲಯ. ಲಕ್ಕುಂಡಿಯ ಕಾಸಿ ವಿಶ್ವನಾಥ. ಕುಕನೂರಿನ ನವಲಿಂಗೇಶ್ವರ, ಕಲ್ಲೇಶ್ವರ, ಗದುಗಿನ ತ್ರಿಕೂಟೇಶ್ವರ, ಸರಸ್ವತಿ ಮತ್ತು ಸೋಮೇಶ್ವರ ದೇವಾಲಯಗಳು ಮುಖ್ಯವಾಗಿವೆ.

**೩. ಹೊಯ್ಸಳಯುಗ**

ಕಲ್ಯಾಣ ಚಾಲುಕ್ಯರ ಸಾಮಂತರಾಗಿದ್ದ ಹೊಯ್ಸಳರು ೧೨ನೇ ಶತಮಾನದ ಪೂರ್ವಾರ್ಧದಲ್ಲಿ ಸ್ವತಂತ್ರರಾದ ನಂತರ ಚಾಲುಕ್ಯರ ಸಾಂಸ್ಕೃತಿಕ ಸಂಸ್ಥೆಗಳಿಗೆ ಉತ್ತರಾಧಿಕಾರಿಗಳಾಗಿ ಆ ಸಾಂಸ್ಕೃತಿಕ ಪರಂಪರೆಯನ್ನು ಸ್ವೀಕರಿಸಿದರು. ಆದ್ದರಿಂದ ಹೊಯ್ಸಳ ಸ್ಥಪತಿಗಳು ಚಾಲುಕ್ಯ ವಾಸ್ತು ಶೈಲಿಯನ್ನೇ ಮುಂದುವರಿಸಿದರಾದರೂ ಅದರಲ್ಲಿ ಅನೇಕ ಹೊಸ ಬಗೆಯ ಪ್ರಯೋಗಗಳನ್ನು ನಡೆಸಿ ಹೊಸ ಅಂಶಗಳನ್ನು ಅಳವಡಿಸಿದರು. ಇವರ ಕಾಲದಲ್ಲಿ ರೂಪಗೊಂಡ ಕಲೆ, ವಾಸ್ತುಶಿಲ್ಪ ವಿಶ್ವ ಪ್ರಸಿದ್ಧಿ ಪಡೆದಿದೆ. "ಹೊಯ್ಸಳ ಕಾಲದಲ್ಲಿ ನಿರ್ಮಾಣವಾಗಿರುವ ದೇವಾಲಯಗಳನ್ನು 'ಸೋಪ್‌ಸ್ಟೋನ್' ಎಂದು ಕರೆಯಲ್ಪಡುವ ಮೆದುವಾದ ಕಲ್ಲಿನಲ್ಲಿ ರೂಪಿಸಿದ್ದಾರೆ. ಇದರಲ್ಲಿ ಸೂಕ್ಷ್ಮ ಕೆತ್ತನೆ ಕೆಲಸಕ್ಕೆ ಹೆಚ್ಚಿನ ಅವಕಾಶವಿರುತ್ತದೆ. ಈ ಕಲ್ಲಿನ ಗುಣವೆಂದರೆ ಭೂಮಿಯಿಂದ ಅಗೆದು ತೆಗೆದಾಗ ತುಂಬಾ ಮೆದುವಾಗಿರುತ್ತದೆ. ನಂತರ ಗಾಳಿಯಾಡುತ್ತಿದ್ದಂತೆಲ್ಲಾ ಗಡುಸಾಗುತ್ತದೆ. ಈ ಕಲ್ಲಿನಲ್ಲಿ ಕೊರೆಯುವುದು ಸುಲಭ. ತುಂಬಾ ಸೂಕ್ಷ್ಮವಾದ ಕೆತ್ತನೆಗಳನ್ನು ನೋಡಬಹುದು.[೪೧] ಹೊಯ್ಸಳ ಶೈಲಿಯ ಕಟ್ಟಡ ನಿರ್ಮಾಣದಲ್ಲಿ ವಾಸ್ತುಶಿಲ್ಪಿಯ ಕೈಚಳಕಕ್ಕಿಂತಲೂ ರೂವಾರಿಯ ಅನುಪಮ ಕಲಾವಂತಿಕೆ ಎದ್ದು ಕಾಣುತ್ತದೆ ಎಂಬುದು ಕಲಾವಿಮರ್ಶಕರ ಅಭಿಪ್ರಾಯ. ಪರ್ಸಿಬ್ರೌನರ ಮಾತುಗಳಲ್ಲಿ ಹೇಳಬೇಕೆಂದರೆ "ಹೊಯ್ಸಳ ದೇವಾಲಯಗಳು ವಾಸ್ತು ನಿರ್ಮಾಣಗಳೆನ್ನುವುದಕ್ಕಿಂತ ಪ್ರಯೋಗಾತ್ಮಕ

ಕಲಾಮಂದಿರಗಳಾಗಿವೆ. ದೇವಾಲಯದ ಹೊರಗೋಡೆಗಳ ಮೇಲಿನ ವಿಗ್ರಹಗಳು ಒಂದೊಂದು ತಮ್ಮದೇ ಆದ ಪ್ರತ್ಯೇಕ ಸನ್ನಿವೇಶವನ್ನು ಪ್ರತಿನಿಧಿಸುತ್ತದೆ. ದಂತದ ಕೆಲಸಗಾರರು ನಿರ್ಮಿಸುವ ದೇವತಾ ಮೂರ್ತಿಗಳು ಕಲ್ಲಿನಲ್ಲಿ ದೊಡ್ಡ ಆಕಾರದಲ್ಲಿ ಎಲ್ಲಿ ಪುನರಾವರ್ತನೆಗೊಂಡಂತೆ ಭಾಸವಾಗುತ್ತದೆ.[೪೨] ಹೊಯ್ಸಳ ಕಾಲದ ದೇವಾಲಯಗಳು ಕರ್ನಾಟಕದ ಅನೇಕ ಭಾಗಗಳಲ್ಲಿ ಕಂಡುಬಂದರೂ ಅವು ಹೆಚ್ಚಾಗಿ ಹಾಸನ, ಚಿಕ್ಕಮಗಳೂರು ತುಮಕೂರು, ಚಿತ್ರದುರ್ಗ, ಶಿವಮೊಗ್ಗ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಕೇಂದ್ರಿಕೃತವಾಗಿವೆ.[೪೩]

ಹೊಯ್ಸಳರ ಕಾಲದ ದೇವಾಲಯಗಳಲ್ಲಿ ದೇವಾಲಯದ ಮೂರು ಭಾಗಗಳು ಇವೆ. ೧) ಗರ್ಭಗೃಹ ಮತ್ತು ವಿಮಾನ ೨) ಸುಕನಾಸಿ (ಅಂತರಾಳ) ಮತ್ತು ನವರಂಗ (ಮಂಟಪ) ೩) ಅನೇಕ ಬಾರಿ ಮುಖಮಂಟಪವು ಮುಂಭಾಗದಲ್ಲಿರುತ್ತದೆ.[೪೪] ತಲವಿನ್ಯಾಸವನ್ನನುಸರಿಸಿ ಹೊಯ್ಸಳ ದೇವಾಲಯಗಳನ್ನು ಏಕಕೂಟ, ದ್ವಿಕೂಟ, ತ್ರಿಕೂಟ, ಚತುಷ್ಕೂಟ ಮತ್ತು ಪಂಚಕೂಟಗಳಾಗಿ ವಿಂಗಡಿಸಬಹುದು. ಒಂದೇ ಗರ್ಭಗೃಹವಿರುವ ಶಿವಾಲಯಗಳಿಗೆ ಏಕಕೂಟ ದೇವಾಲಯಗಳೆಂದು ಕರೆಯಲಾಗಿದ್ದು ಬೇಲೂರಿನ ಚನ್ನಕೇಶವ ಹಾರನಹಳ್ಳಿಯ ಸೋಮೇಶ್ವರ ಮೊದಲಾದ ದೇವಾಲಯಗಳನ್ನು ಉದಾಹರಿಸಬಹುದು.[೪೫] ಹಳೇಬೀಡಿನ ಹೊಯ್ಸಳೇಶ್ವರ. ಆನೆಕೊಂಡದ ಈಶ್ವರ, ಬೆಳ್ಳೂರಿನ ಕಣ್ಣೇಶ್ವರ ದೇವಾಲಯಗಳು ಪ್ರಸಿದ್ಧ ದ್ವಿಕೂಟ ದೇವಾಲಯಗಳು.[೪೬] ಅದೇ ರೀತಿ ಹೊಯ್ಸಳ ಕಾಲದ ತ್ರಿಕೂಟ ದೇವಾಲಯಗಳ ರಚನೆಯ ಪರ್ವಕಾಲವೆಂದೇ ಹೇಳಬಹುದು. ಕಂಬದಹಳ್ಳಿ, ಭದ್ರಾವತಿ, ಉಂಡಿಗನಹಾಳ್, ಸೆಟ್ಟಿಕೆರೆ, ಬೆಳ್ಳೂರು, ಬಂದಳಿಕೆ, ಹೊಸಹೊಳಲು ಮೊದಲಾದ ಸ್ಥಳಗಳಲ್ಲಿ ತ್ರಿಕೂಟ ದೇವಾಲಯಗಳಿವೆ.[೪೭] ಹೊಯ್ಸಳ ದೇವಾಲಯಗಳ ವಿಶಿಷ್ಟ ಲಕ್ಷಣಗಳಲ್ಲಿ ಜಗತಿ ಒಂದು. ಹೊಯ್ಸಳ ದೇವಾಲಯಗಳು ಎತ್ತರವಾದ ಜಗತಿಯ ಮೇಲೆ ನಿರ್ಮಾಣಗೊಂಡಿವೆ. ಕರ್ನಾಟಕದ ವಾಸ್ತುಶಿಲ್ಪದಲ್ಲಿ ಈ ಜಗತಿಯ ಸಂಪ್ರದಾಯ ಹೊಯ್ಸಳ ಕಾಲದಲ್ಲಿ ಅಭಿವೃದ್ಧಿಗೊಂಡಿತು. ಹೊಯ್ಸಳ ದೇವಾಲಯಗಳಲ್ಲಿ ಈ ಜಗತಿ ಸಾಮಾನ್ಯವಾಗಿ ಮೂರರಿಂದ ಐದು ಅಡಿಗಳ ಎತ್ತರವಿದ್ದು. ಜಗತಿಯು ಆಕಾರದಲ್ಲಿ ನಕ್ಷತ್ರಾಕಾರದಲ್ಲಿರುತ್ತದೆ. ಬೇಲೂರಿನ ಚನ್ನಕೇಶವ ದೇವಾಲಯದ ಜಗತಿ ಸುಮಾರು ಐದು ಅಡಿ ಎತ್ತರವಾಗಿದ್ದು ಇದರಲ್ಲಿ ಮುವತ್ತೆರಡು ಕೋನಗಳಿವೆ.[೪೮] ಬಹು ಎತ್ತರವಾಗಿರುವ ಹೊಯ್ಸಳ ದೇವಾಲಯಗಳ ಅಧಿಷ್ಟಾನಗಳು ಅತ್ಯಂತ ಸುಂದರವಾದ ಅಲಂಕರಣವನ್ನು ಹೊಂದಿರುವ ಅಡ್ಡ ಪಟ್ಟಿಕೆಗಳನ್ನು ಪಡೆದುಕೊಂಡಿರುತ್ತದೆ. ಈ ಅಡ್ಡ ಪಟ್ಟಿಗಳಲ್ಲಿ ಆನೆಗಳ ಸಾಲು, ಅಶ್ವಗಳ ಸಾಲು, ಎಲೆ, ಬಳ್ಳಿಗಳ ಸಾಲು, ರಾಮಾಯಣ ಮಹಾಭಾರತಗಳ ಕಥೆಗಳನ್ನು ಒಳಗೊಂಡ ಸಾಲು, ಹಂಸಗಳ ಸಾಲು ಹೀಗೆ ವಿವಿಧ ಚಿತ್ರಪಟ್ಟಿಕೆಗಳನ್ನು ಅವುಗಳಲ್ಲಿ ಕಾಣಬಹುದು.[೪೯] ಹೊಯ್ಸಳ ದೇವಾಲಯಗಳ ಮುಖಮಂಟಪಗಳಲ್ಲಿರುವ ಕಕ್ಷಾಸನಗಳು ಗಮನಾರ್ಹವಾಗಿದ್ದು ಇವುಗಳ ಹಿಂಭಾಗಗಳು ವಿವಿಧ ಬಗೆಯ ಶಿಲ್ಪಗಳಿಂದ ಅಲಂಕೃತವಾಗಿರುತ್ತವೆ. ಅಮೃತಾಪುರದ ಅಮೃತೇಶ್ವರ, ಬಸರಾಳದ ಮಲ್ಲಿಕಾರ್ಜುನ, ಹಳೇಬೀಡಿನ ಹೊಯ್ಸಳೇಶ್ವರ ಮತ್ತು ಹಾರನಹಳ್ಳಿಯ ಸೋಮೇಶ್ವರ ಹಾಗೂ ಕೇಶವ ದೇವಾಲಯದಲ್ಲಿ

ಇವುಗಳನ್ನು ನೋಡಬಹುದು.[೫೦] ಹೊಯ್ಸಳ ಶೈಲಿಯ ಅತ್ಯಂತ ಶ್ರೀಮಂತ ಶಿಲ್ಪದಿಂದ ಕೂಡಿದ ಪ್ರಾತಿನಿಧಿಕ ದೇವಾಲಯಗಳಲ್ಲಿ ಹಳೇಬೀಡಿನ ಹೊಯ್ಸಳೇಶ್ವರ ಬೇಲೂರಿನ ಚನ್ನಕೇಶವ ಮತ್ತು ಸೋಮನಾಥಪುರದ ಕೇಶವ ದೇವಾಲಯವನ್ನು ಹೆಸರಿಸಬಹುದು. ಹೊಯ್ಸಳೇಶ್ವರ ದೇವಾಲಯವು ಈ ಶೈಲಿಯ ದೇವಾಲಯಗಳಲ್ಲಿ ಅತಿ ದೊಡ್ಡದು. ೭೦೦ ಅಡಿಗಳಿಗೂ ಹೆಚ್ಚು ಉದ್ದ ಗೋಡೆಯ ಪಟ್ಟಿಕೆಗಳಲ್ಲಿರುವ ಆನೆಗಳ ಸಂಖ್ಯೆಯೇ ೨೦೦೦ಕ್ಕೂ ಅಧಿಕ ಸರ್ವಲಂಕಾರ ಭೂಷಿತ ಆನೆಗಳ ಭಂಗಿಯು ವೈವಿಧ್ಯಮಯ ಈ ದೇವಾಲಯದ ಶಿಲ್ಪಕಲೆ ಈ ಶೈಲಿಯ ದೇಗುಲಗಳಲ್ಲಿ ಇತರ ಕಡೆಗಳಲ್ಲೆಲ್ಲೂ ಇಷ್ಟು ಭವ್ಯವಾಗಿಲ್ಲ. ಹೊಯ್ಸಳ ಶೈಲಿಯ ಮತ್ತೊಂದು ವಿಶಿಷ್ಟ ಅಂಶವೆಂದರೆ ಮದನಿಕ ಅಥವಾ ಶಿಲಾಬಾಲಿಕೆಯರು ನವರಂಗದ ಸುಂದರ ಕಂಬಗಳ ಬೋದಿಗೆಯ ಮೇಲೆ ಓರೆಯಾಗಿ ನಿಲ್ಲಿಸಲಾಗಿರುವ ಶಿಲಾಬಾಲಿಕೆಯರ ಬೆಡಗಿನ ಶಿಲ್ಪಗಳನ್ನು ಅಲಂಕರಕ್ಕಾಗಿಯೇ ಜೋಡಿಸಲಾಗಿದೆ. ಹೀಗೆ ಹೊಯ್ಸಳರ ಕಾಲದ ದೇವಾಲಯಗಳು ಕರ್ನಾಟಕದ ಹಲವು ಭಾಗಗಳಲ್ಲಿ ನಿರ್ಮಾಣಗೊಂಡಿದ್ದು ಅವರ ಕಾಲದ ಸಾಂಸ್ಕೃತಿಕ ವೈಭವವನ್ನು ಬಿಂಬಿಸುತ್ತವೆ.

### ೪) ವಿಜಯನಗರದ ಕಾಲ

ಇಡೀ ದಕ್ಷಿಣ ಭಾರತಕ್ಕೆ ಧಾರ್ಮಿಕ ರಕ್ಷಣೆಯನ್ನು ನೀಡಿದೆ ಮಧ್ಯಕಾಲೀನ ಕರ್ನಾಟಕದ ಒಂದು ಸಾಮ್ರಾಜ್ಯ ವಿಜಯನಗರ. ಎಲ್ಲಾ ಕಲೆಗಳಂತೆ ವಾಸ್ತುಶಿಲ್ಪ. ಶಿಲ್ಪಗಳೂ ಈ ಸಾಮ್ರಾಜ್ಯದಡಿಯಲ್ಲಿ ಪೋಷಣೆಯನ್ನು ಪಡೆದವು. ದಕ್ಷಿಣ ಭಾರತದ ಉತ್ತರಭಾಗದಲ್ಲಿ ಚಾಲುಕ್ಯರ, ಕಾಕತೀಯರ ಮತ್ತು ಹೊಯ್ಸಳರ ಪರಂಪರೆಯನ್ನು ಮುಂದುವರೆಸಿದರು.[೫೧] ಇವರ ಕಾಲದ ದೇವಾಲಯ ವಾಸ್ತುಶಿಲ್ಪ ಶೈಲಿಯ ವಿಜಯನಗರ ವಾಸ್ತು ಶೈಲಿ ಎಂದೇ ಪ್ರಸಿದ್ಧಿ ಪಡೆದಿದೆ. ಈ ಕಾಲದ ದೇವಾಲಯಗಳು ಇಡೀ ದಕ್ಷಿಣ ಭಾರತದಲ್ಲೆಲ್ಲಾ ಹರಡಿಕೊಂಡಿವೆ. ಹೊಸದಾಗಿ ದೇವಾಲಯಗಳನ್ನು ಕಟ್ಟಿಸಿದಂತೆಯೇ ಹಳೆಯ ದೇವಾಲಯಗಳನ್ನು ಜೀರ್ಣೋದ್ಧಾರಗೊಳಿಸುವುದಕ್ಕೂ ಮತ್ತು ಅವುಗಳನ್ನು ವಿಸ್ತರಿಸುವುದಕ್ಕೂ ಈ ಸಾಮ್ರಾಜ್ಯ ಹೆಚ್ಚು ಗಮನವನ್ನು ಕೊಟ್ಟಿತ್ತು. ದ್ರಾವಿಡ ಮತ್ತು ಹೊಯ್ಸಳ ಶೈಲಿಗಳ ಸುಂದರ ಸಂಯೋಜನೆಯನ್ನು ರೂಢಿಸಿ, ರೂಪಿಸಿಕೊಂಡ ವಿಜಯನಗರ ಶಿಲ್ಪಿಗಳು ವಿಜಯನಗರ ಶೈಲಿಯೆಂದೂ ಪ್ರಸಿದ್ಧವೂ, ನವೀನವೂ, ಖಚಿತವೂ ಆದ ಶೈಲಿಯ ಪ್ರವರ್ತಕರಾದರು. ಅನೇಕ ಧಾರ್ಮಿಕ ವಿಧಿಗಳನ್ನು ದೇವಾಲಯದಲ್ಲಿಯೇ ನೆರವೇರಿಸಬೇಕಾದುದರಿಂದ ದೇವಾಲಯಗಳ ತಳವಿನ್ಯಾಸ ಹೆಚ್ಚು ವಿಸ್ತಾರವಾಗ ತೊಡಗಿದವು. ಇವರ ಕಾಲದ ದೇವಾಲಯಗಳಲ್ಲಿ ಸಾಮಾನ್ಯವಾಗಿ ಗರ್ಭಗೃಹ, ಪ್ರದಕ್ಷಿಣಾ ಪಥ ಸುಕನಾಸಿ, ಅರ್ದಮಂಟಪ, ನವರಂಗ ಮತ್ತು ಮುಖಮಂಟಪಗಳಿರುತ್ತವೆ. ನವರಂಗಕ್ಕೆ ಮೂರು ಪ್ರವೇಶ ದ್ವಾರಗಳಿದ್ದು ಪಕ್ಕದಲ್ಲಿರುವ ಪ್ರವೇಶದ್ವಾರಗಳು ನವರಂಗವನ್ನು ಚಿಕ್ಕದಾದ ಮಂಟಪಗಳಿಗೆ ಕೂಡಿಸಿರುತ್ತವೆ. ದೇವಾಲಯದ ಸುತ್ತಲೂ ಎತ್ತರವಾದ ನಿರ್ಧಿಷ್ಟಪಡಿಸಿದ ದಿಕ್ಕಿನಲ್ಲಿ ಪರಿವಾರ ದೇವತೆಗಳಿಗಾಗಿ ಚಿಕ್ಕಗುಡಿಗಳಿರುತ್ತವೆ. ವಿಶಾಲವಾದ ಪ್ರಾಕಾರದ ಸುತ್ತಲೂ ಎತ್ತರವಾದ ಗೋಡೆಯಿದ್ದು ಪ್ರಾಕಾರವನ್ನು

ಎರಡು ಅಥವಾ ಮೂರು ಕಡೆಗಳಿಂದ ಪ್ರವೇಶಿಸಲು ಪ್ರವೇಶ ಮಂಟಪಗಳು ಕಂಡುಬರುತ್ತವೆ.[೫೨] ಈ ಪ್ರವೇಶ ಮಂಟಪಗಳ ಮೇಲೆ ಎತ್ತರವಾದ ಗೋಪುರಗಳನ್ನು ಕಟ್ಟಿರುತ್ತಾರೆ. ಇದು ದೇವಾಲಯದ ವಾಸ್ತುಶಿಲ್ಪಕ್ಕೆ ವಿಜಯನಗರದ ಶಿಲ್ಪಿಗಳು ನೀಡಿದ ಬಹುದೊಡ್ಡ ಕೊಡುಗೆ ಇದನ್ನೇ ರಾಜಗೋಪುರ ಎಂದೂ ಸಹ ಕರೆಯಲಾಗುತ್ತಿದೆ.[೫೩] ಕೆಲವು ಬಾರಿ ಇದರ ಎತ್ತರವೂ ೧೧ ಅಂತಸ್ತು ಎತ್ತರವಾಗಿರುವುದುಂಟು. ಕಾಂಚೀಪುರದ ಏಕಾಂಬರನಾಥ ದೇವಾಲಯದ ಗೋಪುರವು ೧೧ ಅಂತಸ್ತು ಎತ್ತರವಾಗಿದೆ.[೫೪] ಈ ಕಾಲದ ಶಿಲ್ಪಗಳ ಇನ್ನೊಂದು ಕೊಡುಗೆಯೆಂದರೆ ಹಲವು ಮಂಟಪಗಳಿರುವಂತೆ ದೇವಾಲಯವನ್ನು ವಿಸ್ತರಿಸಿ ವಿನ್ಯಾಸಮಾಡಿದ್ದು ವಿಜಯನಗರ ಕಾಲದಲ್ಲಿ ಗ್ರಾನೈಟ್ ಶಿಲೆಗಳು ಅಪಾರ ಪ್ರಮಾಣದಲ್ಲಿ ದೊರೆಯುತ್ತಿದ್ದು ಅವುಗಳನ್ನು ಹೆಚ್ಚು ಬಳಸಿರುವುದನ್ನು ಕಾಣಬಹುದು. ಇದರಿಂದಾಗಿ ಹೊಯ್ಸಳ ಕಾಲದ ಸೂಕ್ಷ್ಮ ಕೆತ್ತನೆ ಮರೆಯಾಗಿ ಈ ಶಿಲೆಯಲ್ಲಿ ದೇವಾಲಯಗಳು ಹೆಚ್ಚು ವಿಸಾರವೂ ಹಾಗೂ ದೇವಾಲಯದ ಕಂಬಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಉಬ್ಬು ಶಿಲ್ಪಗಳು ಕಂಡುಬಂದವು. ವಿಜಯನಗರದ ದೇವಾಲಯಗಳು ಎತ್ತರವಾದ ಅಧಿಷ್ಠಾನವನ್ನು ಹೊಂದಿರುತ್ತವೆ. ಹಜಾರರಾಮ ಮತ್ತು ವಿಠ್ಠಲ ದೇವಾಲಯಗಳಲ್ಲಿಯೂ ಅಧಿಷ್ಠಾನ ವಿವಿಧ ಬಗೆಯ ಭಾಗಗಳನ್ನು ಹೊಂದಿದ್ದು ಕೈಬಳೆಯಾಕಾರದ ಭಾಗ ಎದ್ದು ಕಾಣುತ್ತದೆ.[೫೫] ವಿಜಯನಗರ ಕಾಲದ ಪ್ರದಕ್ಷಿಣಾಪಥ ಗರ್ಭಗೃಹ ನೆಲೆಗಟ್ಟಿಗಿಂತ ಕೆಳಮಟ್ಟದಲ್ಲಿದ್ದು ಸೋಪಾನವೊಂದರ ಮೂಲಕ ಕೆಳಗಿಳಿಯುವ ವ್ಯವಸ್ಥೆ ಇರುತ್ತದೆ.[೫೬] ವಿಜಯನಗರ ದೇವಾಲಯಗಳ ಗರ್ಭಗೃಹ ಸಾಮಾನ್ಯವಾಗಿ ಚೌಕಾಗಿರುತ್ತವೆ. ಆದರೆ ನಿದ್ರಿಸುತ್ತಿರುವ ಅಥವಾ ಒರಗಿರುವ ಭಂಗಿಯಲ್ಲಿರುವ ದೇವತೆಗಾಗಿ ದೇವಾಲಯವನ್ನು ಕಟ್ಟಿಸಿದಾಗ ಮಾತ್ರ ಗರ್ಭಗೃಹ ಸಮಚತುಷ್ಕೋಣಾಕಾರದಲ್ಲಿರುತ್ತದೆ.[೫೭] ಹಂಪಿ ಪರಿಸರದಲ್ಲಿರುವ ಅನಂತಶಯನ ಗುಡಿ ಇದಕ್ಕೆ ಉತ್ತಮ ಉದಾಹರಣೆ, ವಿಜಯನಗರ ಕಾಲದ ಕಂಬಗಳು ತುಂಬಾ ಕಲಾತ್ಮಕವಾಗಿ ಕಂಡು ಬರುತ್ತವೆ. ಇವರ ಕಾಲದ ಕಂಬಗಳಲ್ಲಿನ ಪುಷ್ಪಬೋದಿಗೆಯು ಹೆಚ್ಚು ಬಾಗಿದ್ದು ಅಲಂಕೃತವಾಗಿರುತ್ತವೆ. ಅಲ್ಲದೇ ಸಂಗೀತ ಕಂಬಗಳು ಮತ್ತೊಂದು ಪ್ರಕಾರದ ಕಂಬಗಳಾಗಿವೆ. ಅಷ್ಟೇ ಅಲ್ಲದೇ ಅಶ್ವಸ್ತಂಭ, ಯಾಳೀಸ್ತಂಭ, ವಿವಿಧ ಮಾದರಿ ಸ್ತಂಭಗಳು ಇವರ ಕಾಲದಲ್ಲಿ ಬೆಳೆದು ಬಂದವು ವಿಜಯನಗರ ಕಾಲದ ಪ್ರಮುಖ ದೇವಾಲಯಗಳೆಂದರೆ ವಿರೂಪಾಕ್ಷ ದೇವಾಲಯ, ಹಜಾರರಾಮಸ್ವಾಮಿ, ಅನಂತಶಯನ, ವಿಜಯ ವಿಠ್ಠಲ ಸ್ವಾಮಿ ದೇವಾಲಯಗಳು ಇನ್ನೂ ಮುಂತಾದ ದೇವಾಲಯಗಳನ್ನು ಹೆಸರಿಸಬಹುದು.

ವಿಜಯನಗರ ಪಥನದ ನಂತರ ಕರ್ನಾಟಕದ ವಾಸ್ತುಶೈಲಿಯಲ್ಲಿ ಏಕತೆ ಉಳಿದುಬರಲಿಲ್ಲ. ಉತ್ತರ ಭಾಗದಲ್ಲಿ ಬಹುಮನಿ ಮತ್ತು ಆದಿಲ್ ಷಾಹಿಗಳ ಪ್ರಭಾವದಿಂದ ಹಿಂದೂ ಮುಸ್ಲಿಂ ಶೈಲಿಯು ಬೆಳಕಿಗೆ ಬಂದಿತು. ಉಳಿದ ಭಾಗಗಳಲ್ಲಿ ಪಾಳೆಯಗಾರರ ಆಳ್ವಿಕೆಯ ಅತಂತ್ರತೆ ಅಧಿಕಾರದ ಹಸ್ತಾಂತರಗಳಿಂದ ದೇಗುಲ ವಾಸ್ತುಶೈಲಿಯು ಸರಳಗೊಂಡಿರುವುದನ್ನು ಕಾಣಬಹುದು. ಹೀಗೆ ಭಾರತವನ್ನು ಒಳಗೊಂಡಂತೆ ಅದರಲ್ಲೂ ಕರ್ನಾಟಕದ ದೇವಾಲಯ ವಾಸ್ತುಶಿಲ್ಪ ಶೈಲಿಯ ಬೆಳವಣಿಗೆಯನ್ನು ಸಂಕ್ಷಿಪ್ತವಾಗಿ ಗುರುತಿಸಬಹುದಾಗಿದೆ.

**ದೇವಾಲಯದ ಲಕ್ಷಣಗಳು**

ವಿಶಾಲವಾದ ಭರತಖಂಡದಲ್ಲಿ ದೇವಾಲಯಗಳ ರಚನೆ ವೈವಿಧ್ಯಮಯವಾಗಿ ಬೆಳೆಯುತ್ತಿದೆ. ಆದರೂ ಕಳೆದ ಎರಡು ಶತಮಾನಗಳಲ್ಲಿ ದೇವಾಲಯದ ಅಧ್ಯಯನವು ಹಲವು ಮಾನದಂಡಗಳನ್ನನುಸರಿಸಿ ಬೆಳೆಯಿತು. ದೇವಾಲಯಗಳ ರಚನೆಗೆ ಆಯಾಕಾಲದ ಧಾರ್ಮಿಕ, ಆರ್ಥಿಕ ಪರಿಸರ ಅಂದಿನ ರಾಜಮಹಾರಾಜರ ದೃಷ್ಟಿ ಕಿಲೋಪಾಸನೆ ಇತ್ಯಾದಿ ವಂಶಗಳು ನೆರವಾದವು. ಸಾಮಾನ್ಯವಾಗಿ ದೇವಾಲಯಗಳ ರಚನೆಯಲ್ಲಿ ಎರಡು ಮುಖ್ಯ ಸೂತ್ರಗಳನ್ನು ಅಳವಡಿಸಲಾಗಿರುತ್ತದೆ. ಅವುಗಳೇ ಮಾನಸೂತ್ರ ಮತ್ತು ವಿನ್ಯಾಸಸೂತ್ರ ಇವು ಕ್ರಮವಾಗಿ ದೇವಾಲಯ ರಚನೆಯ ಲಂಬರೇಖೆ ಮತ್ತು ಅಕ್ಷರೇಖೆಗಳಾಗಿದ್ದು, ಇದರೊಂದಿಗೆ ದೇವಾಲಯ ರಚನಾಕ್ರಮವನ್ನು ಎರಡು ರೀತಿಯಲ್ಲಿ ಗುರುತಿಸಬಹುದು. ಊರ್ಧ್ವಮುಖಕ್ರಮ ಮತ್ತು ತಿರ್ಯಜ್ಮಖಕ್ರಮ ಎಂದು. ದೇವಾಲಯದ ಹೊರ ಭಾಗದಲ್ಲಿ ಕೆಳಗಿನಿಂದ ಮೇಲಕ್ಕೆ ಒಂದಾದ ಮೇಲೊಂದು ಭಾಗವನ್ನು ನಿಶ್ಚಿತ ರೂಪದಲ್ಲಿ ರಚಿಸುವ ಕ್ರಮಕ್ಕೆ ಊರ್ಧ್ವಮುಖಕ್ರಮ ಎಂದು ಅದೇ ರೀತಿ ಒಳಭಾಗದಲ್ಲಿ ಗರ್ಭಗೃಹ ಆದಿಯಾಗಿ ಅದರ ಮುಂದೆ ಇರುವ ಎಲ್ಲಾ ಮಂಟಪ ಇತ್ಯಾದಿಗಳ ರಚನಾಕ್ರಮವನ್ನು ತಿರ್ಯಜ್ಮಖಕ್ರಮ ಎಂದು ಕರೆಯುತ್ತಾರೆ. ಹೀಗೆ ಆಯಾ ರಾಜ ವಂಶಗಳ ಕಾಲದಲ್ಲಿ ನಿರ್ಮಾಣಗೊಂಡ ದೇವಾಲಯಗಳ ಲಕ್ಷಣಗಳನ್ನು ಪ್ರತ್ಯೇಕವಾಗಿ ಗಮನಿಸಿ ಚಾಲುಕ್ಯ ಹೊಯ್ಸಳ, ಗಂಗ, ಕದಂಬ ಶೈಲಿಗಳೆಂದು ಗುರುತಿಸಬಹುದು.[೫೮] ಈ ಮೇಲಿನ ಕ್ರಮಗಳಿಂದ ದೇವಾಲಯದ ಪ್ರಮುಖ ಲಕ್ಷಣಗಳನ್ನು ಕಾಣಬಹುದು. ಅವುಗಳೆಂದರೆ–

## I. ಊರ್ಧ್ವಮುಖ ರಚನೆಗಳು

### ೧) ಅಧಿಷ್ಠಾನ

ಎಲ್ಲಾ ವಸ್ತುಗಳೂ ಇನ್ನೊಂದು ವಸ್ತುವಿನ ಆಧಾರದ ಮೇಲೆ ನಿಂತಿರುತ್ತವೆ. ಒಂದು ವಸ್ತುವು ನಿಲ್ಲಲು ಆಧಾರವಾಗಿರುವ ಭಾಗಕ್ಕೆ ಅಧಿಷ್ಠಾನ ಎಂದು ಹೆಸರು. ದೇವಾಲಯಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ, ಒಟ್ಟು ದೇವಾಲಯಕ್ಕೆ ಆಧಾರವಾಗಿ ನಿರ್ಮಿಸಲ್ಪಟ್ಟಿರುವ ಗೋಡೆ (ಬಿತ್ತಿ)ಯ ಕೆಳಭಾಗದಲ್ಲಿ ಇರುವ ಭಾಗಕ್ಕೆ ಅಧಿಷ್ಠಾನ ಎಂದು ಇದನ್ನು ಆದ್ಯಂಗ ಎಂದೂ ಕರೆಯುತ್ತಾರೆ. ಅಧಿಷ್ಠಾನವು ದೇವಾಲಯದ ಭಾರವನ್ನು ಹೊರುವ ಶಕ್ತಿಯನ್ನು ಪಡೆದಿರಬೇಕಾದುದರಿಂದ ಅದನ್ನು ಭದ್ರವಾಗಿ ರಚಿಸಲಾಗಿರುತ್ತದೆ. ಚತುರ ಶಿಲ್ಪಿಗಳ ಕರಕುಶಲ ಕೆತ್ತನೆಗಳಿಂದ ಆಕರ್ಷಣೀಯವಾಗಿಯೂ ರಚಿಸಲಾಗಿರುತ್ತದೆ. ಕೆಲವೆಡೆಗಳಲ್ಲಿ ಅಧಿಷ್ಠಾನದ ಮೇಲೆ ಶಾಸನಗಳನ್ನೂ ಕೆತ್ತಲಾಗಿದ್ದು ಅಧಿಷ್ಠಾನವು ಚಾರಿತ್ರಿಕ ಮಹತ್ವವನ್ನು ಪಡೆಯಲು ಕಾರಣವಾಗಿರುತ್ತದೆ.

ಅಧಿಷ್ಠಾನದ ತಳವಿನ್ಯಾಸವು ಚೌಕ ಅಥವಾ ಆಯತಾಕಾರವಾಗಿರದು ಕೆಲವೊಮ್ಮೆ ಗಜಪೃಷ್ಠಾಕಾರ ಅಥವಾ ವೃತ್ತಾಕಾರವಾಗಿರುವುದೂ ಉಂಟು.ಉದಾ: ಐಹೊಳೆಯ ದುರ್ಗದೇವಾಲಯವು

ಗಜಪೃಷ್ಠಾಕಾರದಲ್ಲಿದ್ದರೆ ಆಗರದ ನರಸಿಂಹ ದೇವಾಲಯದ ಗರ್ಭಗೃಹದ ತಳವಿನ್ಯಾಸವು ವೃತ್ತಾಕಾರದಲ್ಲಿದೆ. ಅಧಿಷ್ಠಾನದಲ್ಲಿ ಪ್ರಮುಖವಾಗಿ ಇರುವ ಅಂಗಗಳೆಂದರೆ ಉಪಾನ, ಜಗತಿ ಖುರ–ಕುಂಭ, ಪದ್ಮ, ಕುಮುದ, ಕಪೋತ ಮತ್ತು ಪ್ರತಿಗಳು. ಈ ಅಂಗಗಳು ಅಧಿಷ್ಠಾನದಲ್ಲಿ ಒಳಸರಿದಂತಿರುತ್ತವೆ.[೫೯] ಅಧಿಷ್ಠಾನದಲ್ಲಿ ಈ ಅಂಗಗಳಲ್ಲಿ ಸಾಮಾನ್ಯವಾಗಿ ಮೊದಲು ಉಪಾನ ಮತ್ತು ಅಂತ್ಯದಲ್ಲಿ ಪ್ರತೀ–ವಾಜನ /ಪಟ್ಟಿಕಾ ಅಥವಾ ಕಪೋತ. ಈ ಅಂಗಗಳಿಂದ ಅಧಿಷ್ಠಾನದ ಎತ್ತರವು ಹೆಚ್ಚಾಗುವುದಲ್ಲದೆ, ಅಧಿಷ್ಠಾನವು ಹೆಚ್ಚು ಧೃಡವಾಗುತ್ತದೆ. ಈ ಅಂಗ ಉಪಾಂಗಗಳು ಅಧಿಷ್ಠಾನದ ಸೌಂದರ್ಯವನ್ನು ಹೆಚ್ಚಿಸಿ ದೇವಾಲಯದಲ್ಲಿ ಅಧಿಷ್ಠಾನವನ್ನು ಒಂದು ಪ್ರಭಾವಪೂರ್ಣ ಅಂಗವನ್ನಾಗಿ ಮಾರ್ಪಡಿಸುತ್ತದೆ.

**೨) ಭಿತ್ತಿ**

ದೇವಾಲಯದಲ್ಲಿ ರಕ್ಷಣಾತ್ಮಕವಾಗಿ ಕಟ್ಟಿರುವ ಭಾಗಗಳಲ್ಲಿ ಭಿತ್ತಿಯೂ ಒಂದು. ದೇವಾಲಯದ ಗೋಡೆಗೆ 'ಭಿತ್ತಿ' ಎಂದು ಹೆಸರು. ಅಧಿಷ್ಠಾನ ಮತ್ತು ಪ್ರಸ್ತರದ ನಡುವೆ ಇರುವುದು. ಭಿತ್ತಿಯ ರಚನೆಗೆ ಬಳಸಿರುವ ವಸ್ತುಗಳ ಆಧಾರದ ಮೇಲೆ ಅದನ್ನು ಫಲಕಕುಡ್ಯ, ಜಾಲಕಕುಡ್ಯ, ಇಷ್ಟಕಕುಡ್ಯ. ಶೈಲಕಕುಡ್ಯ ಇತ್ಯಾದಿಯಾಗಿ ಕರೆಯಲಾಗಿದೆ. ಇದರಂತೆ ಇಟ್ಟಿಗೆಯಿಂದ ಮಾಡಿದ ಭಿತ್ತಿಗೆ ಇಷ್ಟಕಕುಡ್ಯ ಎಂದೂ ಕಲ್ಲಿನಿಂದ ಮಾಡಿದ ಭಿತ್ತಿಗೆ ಶೈಲಕುಡ್ಯ ಎಂದೂ ಫಲಕಗಳಿಂದ (slab) ಮಾಡಿದ್ದು, ಮಧ್ಯೆ ಕಂಬಗಳಿದ್ದರೆ ಅದಕ್ಕೆ ಫಲಕಕುಡ್ಯ ಎಂದೂ ಹೆಸರು ಅಂತೇ ಜಾಲಕಾ ರಂಧ್ರಗಳಿದ ಕೂಡಿದ ಭಿತ್ತಿಗೆ ಜಾಲಕಕುಡ್ಯ ಎಂದೂ ಹೆಸರು.[೬೦]

ಭಿತ್ತಿಯು ಮೂಲ ದೇವರ ರಕ್ಷಣೆಗಾಗಿ ನಿರ್ಮಿಸಲ್ಪಟ್ಟಿದ್ದು ಇದರ ವಿನ್ಯಾಸವು ಅಧಿಷ್ಠಾನದ ವಿನ್ಯಾಸವನ್ನು ಅನುಸರಿಸುತ್ತದೆ. ಆದ್ದರಿಂದ ಅಧಿಷ್ಠಾನಕ್ಕನುಸಾರವಾಗಿ ಆಯತ–ಚೌಕ–ವೃತ್ತ–ಗಜಪೃಷ್ಠಾಕಾರವನ್ನು ಹೊಂದಿರುವುದು ಕಂಡುಬರುತ್ತದೆ. ಕೆಲವೊಮ್ಮೆ ಭಿತ್ತಿಯ ಮೇಲೆ ಶಾಸನಗಳನ್ನು ಕೆತ್ತಿರುವುದಲ್ಲದೆ, ಉಬ್ಬು ಶಿಲ್ಪಗಳನ್ನೂ ಕೆತ್ತಿರುವುದುಂಟು. ಭಿತ್ತಿಯು ರಕ್ಷಣಾರ್ಥವಾಗಿ ನಿರ್ಮಿಸಲ್ಪಟ್ಟಿದ್ದರೂ ಅದು ಅನೇಕ ರೀತಿಯ ಅಲಂಕಾರಯುತ ರಚನೆಗಳಿಂದ ಕೂಡಿರುತ್ತದೆ. ಇವು ಗೋಡೆಗೆ ಆಧಾರವಾಗಿಯೂ ಅಲಂಕಾರಪ್ರಾಯವಾಗಿಯೂ ಇರುತ್ತವೆ. ಇಂತಹ ಅಂಗಗಳೆಂದರೆ ವೇದಿ/ವೇದಿಕಾ ಕುಡ್ಯಸ್ತಂಭ ಕೋಷ್ಠ ವಾತಾಯನ ತೋರಣ ಮತ್ತು ಕುಂಭಲತಾ.

ಒಟ್ಟಾರೆ ಭಿತ್ತಿಯ ಬೆಳವಣಿಗೆಯನ್ನು ಗುರುತಿಸುವುದಾದರೆ, ಪ್ರಾಚೀನ ದೇವಾಲಯಗಳಲ್ಲಿ ಭಿತ್ತಿಯನ್ನು ದೊಡ್ಡದಾದ ಕಲ್ಲು ಚಪ್ಪಡಿಗಳಿಂದ ರಚಿಸಿದ್ದು ಕುಡ್ಯಸ್ತಂಭಗಳಾಗಲೀ ಯಾವುದೇ ರೀತಿಯ ಅಲಂಕರಣವಾಗಲಿ ಇರಲಿಲ್ಲ.

**ಉದಾ:** ಮಹಾಕೂಟದ ಓರೇ ಮಹಾಕೂಟೇಶ್ವರ ದೇವಾಲಯವನ್ನು ಹೇಳಬಹುದು.

### ೩) ಪ್ರಸ್ತರ

ಭಿತ್ತಿಯ ಮೇಲೆ ಇರುವ ಭಾಗವೇ 'ಪ್ರಸ್ತರ' ದೇವಾಲಯದ ಷಡ್ವರ್ಗಕ್ರಮದಲ್ಲಿ ಇದು ಮೂರನೆಯ ಭಾಗವಾಗಿದ್ದು ಭಿತ್ತಿಯ ಅಂತ್ಯದಿಂದ ಮೇಲ್ಕಟ್ಟಡದ ಪ್ರಾರಂಭದವರೆಗಿನ ಭಾಗವಾಗಿರುವುದು. ಇದು ಭಿತ್ತಿಯ ಸ್ತಂಭ ಬೋದಿಗೆಯ ಮೇಲಿನಿಂದ ಆರಂಭವಾಗಿದ್ದು ಸ್ತಂಭದಿಂದ ಸಂಪರ್ಕವನ್ನು ಕಲ್ಪಿಸುವುದು. ಪ್ರಸ್ತರವೂ ಕೂಡ ಕೆಲವು ಅಂಗಗಳಿಂದ ಕೂಡಿ ವಿಧವಿಧವಾಗಿ ಅಲಂಕೃತವಾಗಿರುವುದಲ್ಲದೆ, ಮೇಲ್ಕಟ್ಟಡದಲ್ಲಿ ಪ್ರತಿ ತಲಗಳ ಅಂತ್ಯದಲ್ಲೂ ಇರುವುದು.

ಪ್ರಸ್ತರದಲ್ಲಿ ಉತ್ತರ, ವಾಜನ, ವಲಭೀ, ಕಪೋತ, ಆಲಿಂಗ, ಆಂತರಿಕ, ಪ್ರತೀ ಮತ್ತು ವಾಜನ ಈ ಅಂಗಗಳು ಕ್ರಮವಾಗಿ ಇರುವವು.[೬೧] ಪ್ರಸ್ತರದ ಈ ಎಲ್ಲ ಅಂಗಗಳ ವಿವಿಧ ರೀತಿಯ ಜೋಡಣೆ, ರಚನೆಯಿಂದ ವಿವಿಧ ಪ್ರಭೇದಗಳನ್ನು ಮಾಡಬಹುದೆಂಬ ಸೂಚನೆ ಗ್ರಂಥಗಳಲ್ಲಿದ್ದರೂ ಆ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಿಲ್ಲ. ಪ್ರಾಚೀನ ದೇವಾಲಯಗಳಲ್ಲಿ ಪ್ರಸ್ತರದ ಎಲ್ಲ ಅಂಗಗಳೂ ಇರುವುದಿಲ್ಲ.

### ೪) ಗ್ರೀವ

ಗ್ರೀವವು ದೇವಾಲಯದಲ್ಲಿ ಷಡ್ವರ್ಗ ಕ್ರಮದಲ್ಲಿ ನಾಲ್ಕನೆಯ ಭಾಗ ಇದು ಪ್ರಸ್ತರ ಮತ್ತು ಶಿಖರದ ನಡುವಿನ ಭಾಗವಾಗಿದ್ದು, ಇವುಗಳ ನಡುವೆ ಗ್ರೀವವು ಕುತ್ತಿಗೆಯಂತೆ ಒಳಸರಿದಿರುವುದು. ಇದರ ಕೆಳಗೆ ವೇದಿಯೂ ಇರುವುದು.[೬೨] ಗ್ರೀವವು ಅದರ ಮೇಲೆ ಇರುವ ಶಿಖರದ ಆಕಾರದಲ್ಲಿಯೇ ಇರುವುದು. ದೇವಾಲಯವು ಮೂಲದಿಂದ ಮೇಲಿನ ತುದಿಯವರೆಗೂ ಒಂದೇ ರೀತಿಯಲ್ಲಿದ್ದಾಗ ಗ್ರೀವವು ಅಧಿಷ್ಠಾನದ ವಿನ್ಯಾಸವನ್ನೇ ಅನುಸರಿಸಬೇಕಾಗುತ್ತದೆ. ಇಲ್ಲದಿದ್ದಲ್ಲಿ ಶಿಖರದ ಆಕಾರಕ್ಕೆ ತಕ್ಕಂತೆ ಗ್ರೀವದ ಆಕಾರದಲ್ಲಿ ಬದಲಾವಣೆ ತರುವುದು ಅನಿವಾರ್ಯವಾಗುತ್ತದೆ. ಗ್ರೀವದಲ್ಲಿ ಗೋಡೆಯಂತೆ ತೋರುವ ಭಾಗವನ್ನು 'ಗ್ರೀವಪಿಂಡ' ಎನ್ನುವರು. ಗ್ರೀವದ ನಾಲ್ಕೂ ದಿಕ್ಕುಗಳಲ್ಲಿ ಕೋಷ್ಠಗಳಿದ್ದು ಅದರಲ್ಲಿ ಉಬ್ಬುಶಿಲ್ಪಗಳು ಇರುತ್ತವೆ. ಈ ಕೋಷ್ಠಗಳಿಗೆ ಗ್ರೀವಕೋಷ್ಠಗಳೆಂದೂ, ಅದರಲ್ಲಿರುವ ಮೂರ್ತಿಶಿಲ್ಪಗಳಿಗೆ 'ಗ್ರೀವ ದೇವತೆ'ಗಳೆಂದು ಹೆಸರು.

### ೫) ಶಿಖರ

ಗ್ರೀವ ಮತ್ತು ಸ್ತೂಪಿಯ ನಡುವೆ ಬಹುಪಾಲು ಗುಮ್ಮಟದ ಆಕಾರದಲ್ಲಿರುವುದೇ ಶಿಖರವೆಂದು ಸ್ಥೂಲವಾಗಿ ಹೇಳಬಹುದು. ಇದರ ಮೇಲೆ 'ಶಿಖಾ' (ಸ್ತೂಪಿ) ಇರುವುದರಿಂದ ಇದಕ್ಕೆ 'ಶಿಖರ' ಎಂಬ ಹೆಸರು ಇದೆ. ಶಿಖರವು ವಿವಿಧ ವಿನ್ಯಾಸಗಳಿಂದ ಕೂಡಿ ಒಟ್ಟು ದೇವಾಲಯಕ್ಕೆ ಶೋಭಾಯಮಾನವಾಗಿರುವುದು. ಶಿಖರವು ಮೂಲದೇವಾಲಯದ ತಳವಿನ್ಯಾಸವನ್ನು ಅನುಸರಿಸಿ ರಚಿತವಾಗಿರಬಹುದು. ಇಲ್ಲವೆ ಶಿಖರ ಮಾತ್ರ ಬೇರೆ ವಿನ್ಯಾಸದಲ್ಲಿರಬಹುದು. ಚೌಕಾಕಾರದ ತಳವಿನ್ಯಾಸವನ್ನು ಹೊಂದಿರುವ ಬಹುಪಾಲು ದೇವಾಲಯಗಳು ಚೌಕಾಕಾರದ ಶಿಖರವನ್ನೇ

ಹೊಂದಿವೆ.[೬೩] ತಳವಿನ್ಯಾಸವು ಯಾವ ರೀತಿಯಲ್ಲೇ ಇದ್ದರೂ, ಒಂದು ದೇವಾಲಯದ ಶೈಲಿಯನ್ನು ನಿರ್ಧರಿಸುವಲ್ಲಿ ಶಿಖರದ ಆಕಾರವೇ ಪ್ರಧಾನವಾದುದು. ಸಾಮಾನ್ಯವಾಗಿ ನಾವು ಕಾಣುವಂತೆ ಶಿಖರವು ನಾಲ್ಕು ಮುಖ ಎಂಟು ಮುಖ ಅಥವಾ ವೃತ್ತಾಕಾರದಲ್ಲಿರುತ್ತದೆಂದು ಹೇಳಬಹುದು. ಶಿಖರದ ಆಕಾರದ ಆಧಾರದ ಮೇಲೆ ಇದನ್ನು ಮುಖ್ಯವಾಗಿ ವಿಷ್ಣುಛಂದ, ರುದ್ರಛಂದ, ಬ್ರಹ್ಮಛಂದ ಎಂದು ವರ್ಗೀಕರಿಸುತ್ತಾರೆ, ಅಂತೆಯೇ ಅದರ ಬಳಕೆಯೂ ಕರ್ನಾಟಕದಲ್ಲಿ ಕಡಿಮೆಯೇ.

### ೬) ಸ್ತೂಪಿ

ಶಿಖರದ ಮೇಲೆ ಇರುವ ಕುಂಭಕ್ಕೆ ಸ್ತೂಪಿ (ಕಲಶ) ಎಂದು ಹೆಸರು 'ಘಟ' 'ಕುಂಭ' ಎಂದು ಹೇಳಬಹುದು ಇದು ಷಡ್ವರ್ಗಕ್ರಮದಲ್ಲಿ ಆರನೆಯ ಮತ್ತು ಕೊನೆಯ ಭಾಗ.[೬೪] ಈ ಕಲಶದ ಪ್ರತಿಕೃತಿಯು ಗರ್ಭಗೃಹದ ಅಸ್ಥಿಭಾರದಲ್ಲಿರುವುದು. ಸ್ತೂಪಿಯ ಕೆಳಭಾಗವು ಶಿಖರದ ಕಟ್ಟಡದೊಳಗೆ ಸೇರಿರುತ್ತದೆ. ಸ್ತೂಪಿಯು ಶಿಖರದ ಮೇಲೆ ಸುತ್ತ ಹರಡಿದಂತಿರುವ ಮಹಾಪದ್ಮದ ಮೇಲೆ ಇರುತ್ತದೆ. ಸ್ತೂಪಿಯ ಕೆಳಗಿನ ಈ ಪದ್ಮವು ಶಿಖರದ ಅಕಾರವನ್ನೇ ಅನುಸರಿಸುವುದು.

ಸ್ತೂಪಿಗಳು ಕೆಲವೆಡೆ ಕಲ್ಲಿನದಾಗಿರುತ್ತವೆ. ಆದರೆ ಬಹುಪಾಲು ದೇವಾಲಯಗಳಲ್ಲಿ ಲೋಹದ (ತಾಮ್ರದ) ಹೊದಿಕೆಯಿರುವ ಸ್ತೂಪಿಯನ್ನು ಕಾಣುತ್ತೇವೆ. ಸ್ತೂಪಿಯು ಸಾಮಾನ್ಯವಾಗಿ ದುಂಡಾಗಿರುವುದಾದರೂ ದೇವಾಲಯದ ಒಟ್ಟು ವಿನ್ಯಾಸ ಅಥವಾ ಶಿಖರದ ಆಕಾರವನ್ನನುಸರಿಸಿಯೂ ಇರಬಹುದು. ಬಾದಾಮಿಯ ಕೆಳಗಣ ಶಿವಾಲಯದಲ್ಲಿ ಆಮಲಕ ರೀತಿಯ ಸ್ತೂಪಿಯಿದ್ದರೆ ಉಳಿದಂತೆ ಕುಂಭಾಕಾರದ ಸ್ತೂಪಿಯನ್ನು ಕಾಣಬಹುದು. ಸ್ತೂಪಿಯಲ್ಲೂ ಕೆಲವು ಅಂಗಗಳಿದ್ದು ಅವುಗಳಲ್ಲಿ ಮುಖ್ಯವಾದವು ಘಟ, ಗಲ ಮತ್ತು ಮುಕುಲ. ಸ್ತೂಪಿಯ ಉಬ್ಬಿದ ಭಾಗವನ್ನು 'ಘಟ' ಎಂದೂ ಅದರ ಕುತ್ತಿಗೆಯಂತಹ ಭಾಗವನ್ನು 'ಗಲ' ಎಂದೂ ಅದರ ತುದಿಯಲ್ಲಿರುವ ಮೊಗ್ಗಿನಂತಹ ಭಾಗವನ್ನು 'ಮುಕುಲ' ಎಂದೂ ಹೆಸರಿಸಲಾಗಿದೆ.

## II. ತಿರ್ಯಙ್ಮುಖ ರಚನೆಗಳು

### ೧) ಗರ್ಭಗೃಹ

ಗರ್ಭಗೃಹವು ದೇವಾಲಯದ ಮೂಲ ಮುಖ್ಯಭಾಗ. ದೇವಾಲಯವನ್ನು ಯಾವ ದೇವರಿಗಾಗಿ ಕಟ್ಟಲಾಗಿರುತ್ತದೆಯೋ ಆ ಮೂಲ ಬಿಂಬವು ಇಲ್ಲಿ ಪ್ರತಿಷ್ಠಾಪಿತವಾಗಿರುತ್ತದೆ. ಇದಕ್ಕೆ ಗರ್ಭಗೃಹ, ಪ್ರಾಸಾದ, ಮೂಲಪ್ರಾಸಾದ ಎಂದು ಹೆಸರಿದೆ. ಸುಪ್ರಭೇದಾಗಮವು ಇದನ್ನು ದೇವತಾಮಂಟಪ ಎಂದಿದೆ.ಮೂರ್ತಿಯನ್ನನುಸರಿಸಿ ಇದು ಚೌಕಾಕಾರ ಅಥವಾ ಆಯತಾಕಾರವಾಗಿರುವುದು. ಬಹುಪಾಲು ದೇವಾಲಯಗಳು ಪೂರ್ವ ದಿಕ್ಕಿಗೆ ಅಭಿಮುಖವಾಗಿರುವುದಾದರೂ ಇತರ ದಿಕ್ಕುಗಳಿಗೆ

ಅಭಿಮುಖವಾಗಿರುವ ದೇವಾಲಯಗಳೂ ಇವೆ. ಹಾಗಾಗಿ ದೇವಾಲಯದ ಪ್ರವೇಶವು ಯಾವ ದಿಕ್ಕಿಗೇ ಇದ್ದರೂ ಗರ್ಭಗೃಹವು ಮುಖಮಾಡಿರುವ ದಿಕ್ಕನ್ನೇ ಮುಖ್ಯವೆಂದು ಪರಿಗಣಿಸಲಾಗುವುದು. ಗರ್ಭಗೃಹದ ಸುತ್ತ ಇರುವ ಭಿತ್ತಿಗೆ 'ಗೃಹಪಿಂಡ' ಎಂದು ಹೆಸರು ಸಾಮಾನ್ಯವಾಗಿ ಗರ್ಭಗೃಹಕ್ಕೆ ಮಧ್ಯಭಾಗದಲ್ಲಿ ಒಂದು ದ್ವಾರವಿರುವುದು. ಅದು ಕೆಲವೊಮ್ಮೆ ಚತುರ್ಮುಖ ಮೂರ್ತಿಗಳಿದ್ದಾಗ ನಾಲ್ಕೂ ದಿಕ್ಕುಗಳಲ್ಲಿ ದ್ವಾರವಿರುವುದುಂಟು. ಅಂತಹ ದೇವಾಲಯಗಳಿಗೆ ಸರ್ವತೋಭದ್ರ ದೇವಾಲಯ ಎಂದು ಕರೆಯುತ್ತಾರೆ. ಉದಾ: ಎಲ್ಲೋರದ ಜೈನ ಗುಹಾ ದೇವಾಲಯವೊಂದು ಸರ್ವತೋಭದ್ರ ದೇವಾಲಯವಾಗಿದೆ.

ದೇವಾಲಯಗಳಲ್ಲಿ ಕೆಲವು ಉದ್ದೇಶಗಳಿಗಾಗಿ ಒಂದಕ್ಕಿಂತ ಹೆಚ್ಚು ಗರ್ಭಗೃಹಗಳು ಇರುತ್ತವೆ. ಹೀಗಿದ್ದಾಗ ಎರಡು ಗರ್ಭಗೃಹಗಳಿದ್ದರೆ ದ್ವಿಕೂಟಾಚಲ, ಮೂರು ಗರ್ಭಗೃಹಗಳಿದ್ದರೆ ತ್ರಿಕೂಟಾಚಲ, ಇದೇ ರೀತಿ ನಾಲ್ಕು ಗರ್ಭಗೃಹಗಳಿರುವ ಚತುಷ್ಕೂಟಾಚಲ, ಐದು ಗರ್ಭಗೃಹಗಳಿರುವ ಪಂಚಕೂಟಾಚಲಗಳೂ ಇವೆ.[೬೫] ಈ ಎಲ್ಲಾ ಗರ್ಭಗೃಹಗಳಿಗೂ ಸೇರಿದಂತೆ ಒಂದೇ ಅಧಿಷ್ಠಾನವಿರುತ್ತದೆ. ಹೀಗೆ ದೇವಾಲಯದಲ್ಲಿ ಮೂರು ಗರ್ಭಗೃಹಗಳಿದ್ದಾಗ ಮಧ್ಯದಲ್ಲಿ ಒಂದು ಗರ್ಭಗೃಹವಿದ್ದು ಅಕ್ಕ-ಪಕ್ಕದಲ್ಲಿ ಎದುರು ಬದುರಾಗಿ ಉಳಿದ ಎರಡು ಗರ್ಭಗೃಹಗಳಿರುತ್ತವೆ. ಹಾಗೆ ಗರ್ಭಗೃಹದ ಸುತ್ತ ಪ್ರದಕ್ಷಣಾಪಥವಿರುವ ದೇವಾಲಯಗಳಿಗೆ 'ಸಾಂಧಾರ' ದೇವಾಲಯ ಎಂದು ಪ್ರದಕ್ಷಣಾಪಥವಿಲ್ಲದ ದೇವಾಲಯಗಳಿಗೆ 'ನಿರಂಧಾರ' ದೇವಾಲಯ ಎಂದು ಕರೆಯುತ್ತಾರೆ. ಗರ್ಭಗೃಹವು ಉಳಿದ ಎಲ್ಲಾ ಮಂಟಪಗಳಿಗಿಂತ ಸರಳ ರಚನೆಯನ್ನು ಹೊಂದಿರುವುದಾದರೂ ಕೆಲವೊಮ್ಮೆ ಪದ್ಮದಳಾಲಂಕೃತ ಸಾಂಧರ, ವಿತಾನ ಮತ್ತು ದ್ವಾರಗಳನ್ನೂ ಹೊಂದಿರುವುದುಂಟು. ಇದರ ಉತ್ತರ ದಿಕ್ಕಿನ ಗೋಡೆಯಲ್ಲಿ ವಾದಿಮಾರ್ಗವಿರುವುದು ಅಂದರೆ ಗರ್ಭಗೃಹದಲ್ಲಿ ವಿಗ್ರಹಕ್ಕೆ ಅಭಿಷೇಕ ಮಾಡಿದ ನೀರು ಹೊರಗೆ ಹೋಗಲು ಒಂದು ಜಲಪ್ರಣಾಳಿಯನ್ನು ಕಾಣಬಹುದು. ಅದನ್ನು ಸಿಂಹ, ಗಜ, ವ್ಯಾಳ ಮುಂತಾದ ಪ್ರಾಣಗಳ ಮುಖದಿಂದ ಅಲಂಕರಿಸಲಾಗಿದೆ. ಅದೇ ರೀತಿ ಗರ್ಭಗೃಹದ ಒಳ ಗೋಡೆಯಲ್ಲಿ ಕಂಬಗಳು ಇರುವುದನ್ನು ಕಾಣಬಹುದು.ಉದಾ: ಅರಸೀಕೆರೆಯ ಸಹಸ್ರಕೂಟ ಬಸದಿಯ ಗರ್ಭಗೃಹದಲ್ಲಿ ದೇವಕೋಷ್ಟಗಳನ್ನ ಕಾಣಬಹುದು.

### ೨) ಅಂತರಾಳ

ಗರ್ಭಗೃಹದ ಬಗೆಗೆ ವಿವರಿಸುವಾಗ ಮಯಮತವು ಗರ್ಭಗೃಹ ಮತ್ತು ಅರ್ಧ ಮಂಟಪವನ್ನು ಸೇರಿಸುವಂತೆ ಅಂತರಾಳವನ್ನು ರಚಿಸಿ ಅವಶ್ಯವಿದ್ದಲ್ಲಿ ಮುಂದೆ ಒಂದು ಪ್ರದೇಶದಂತೆ ಕಟ್ಟಬಹುದೆಂದೂ, ಅದರ ಮುಂದೆ ಮುಖಮಂಟಪ ಅರ್ಧ ಮಂಟಪವನ್ನು ರಚಿಸಬೇಕೆಂದೂ ಹೇಳುತ್ತದೆ. ಇಲ್ಲಿ ಅಂತರಾಳವು ಕಡ್ಡಾಯ ಭಾಗವಾಗಿಲ್ಲ.ಹಾಗೆ ಪ್ರದಕ್ಷಣಾಪಥವನ್ನು ಅಂತರಾಳವೆಂದು ಕರೆಯಲಾಗಿದೆ. ಇದರಿಂದಾಗಿ ಗರ್ಭಗೃಹದ ಮುಂದಿನ ಮಂಟಪವನ್ನು ಅಂತರಾಳ ಮಂಟಪ ಎಂದು ಗುರುತಿಸುತ್ತಾರೆ.[೬೬] ಇದರ ಮೇಲೆ ಸುಖನಾಸಿಯು ಇದ್ದರೆ ಇದಕ್ಕೆ ಸುಖನಾಸಿ ಎಂದು ಕರೆಯುತ್ತಾರೆ. ಮೂಲದೇವರಿಗೆ

ಸಂಬಂಧಿಸಿದ ವಿಗ್ರಹಗಳು ಅಂತರಾಳದಲ್ಲಿರುತ್ತವೆ. ಇದರ ಮಧ್ಯೆ ಸ್ತಂಭಗಳು ಇರುವುದಿಲ್ಲ. ಅಂತರಾಳಕ್ಕೆ ದ್ವಾರವಿದ್ದರೆ ಮುಚ್ಚಿದ ಅಂತರಾಳ ಎಂದು ದ್ವಾರವಿಲ್ಲದಿದ್ದಾಗ ಇದನ್ನು ತೆರೆದ ಅಂತರಾಳ ಎಂದೂ ಕರೆಯುವರು. ಬಹುಪಾಲು ದೇವಾಲಯಗಳಲ್ಲಿ ಅಂತರಾಳ ಮತ್ತು ಅರ್ಧಮಂಟಪಗಳಲ್ಲಿ ಯಾವುದಾದರೊಂದು ಇರುತ್ತದೆ. ಆದರೂ ಕೆಲವು ದೇವಾಲಯಗಳಲ್ಲಿ ಗರ್ಭಗೃಹದ ಮುಂದೆ ಅಂತರಾಳ ಮತ್ತು ಅರ್ಧ ಮಂಟಪ ಎರಡು ಇರುವವು. ಉದಾ: ಹಂಪೆ ವಿರೂಪಾಕ್ಷ, ಕೃಷ್ಣ, ಅಚ್ಚುತರಾಯ ಮುಂತಾದ ದೇವಾಲಯಗಳಲ್ಲಿ ಅಂತರಾಳ ಮತ್ತು ಅರ್ಧಮಂಟಪ ಎರಡೂ ಇವೆ.

**೩) ನವರಂಗ**

ಅಂತರಾಳದ ಮುಂದಿನ ಮಂಟಪವನ್ನೇ ನವರಂಗ ಎಂದು ಹೇಳುವರು. ಭಗವಂತನಿಗಾಗಿ ಸಂಗೀತ, ಹಾಡು, ನೃತ್ಯವನ್ನು ಮಾಡಲೆಂದು ನಿರ್ಮಿಸಿದ್ದರಿಂದ ಇದಕ್ಕೆ ನೃತ್ಯ ಮಂಟಪ ಎಂದೂ ಹೆಸರಿದೆ. ಮಹಾಮಂಟಪ ಎಂದೂ ಕರೆಯುತ್ತಾರೆ. ನವರಂಗವು ದೇವಾಲಯದಲ್ಲಿ ವಿಸ್ತಾರವಾದ ರಚನೆಯಾಗಿದ್ದು. ಚೌಕಾಕಾರವಾಗಿರುವುದಾದರೂ, ಆಯತಾಕಾರವಾಗಿರುವದೂ ಉಂಟು. ಕೆಲವೊಮ್ಮೆ ಇದಕ್ಕೆ ಪ್ರತ್ಯೇಕ ಅಧಿಷ್ಠಾನವಿರುವುದು.[೬೭] ಇದರ ಸುತ್ತ ಭಿತ್ತಿ ಇರಬಹುದು. ಇಲ್ಲವೆ ತೆರೆದ ಮಂಟಪವಾಗಿರಬಹುದು. ಈ ನವರಂಗದಲ್ಲಿ ಮಧ್ಯೆ ಮಾತ್ರವಲ್ಲದೆ ಅಕ್ಕ-ಪಕ್ಕಗಳಲ್ಲೂ ದ್ವಾರಗಳಿದ್ದು. ಎರಡೂ, ಮೂರೂ ಕಡೆಗಳಿಂದ ಪ್ರವೇಶವಿರವುದುಂಟು. ಉದಾ: ತಲಕಾಡಿನ ಕೀರ್ತಿ ನಾರಾಯಣ, ಬೇಲೂರಿನ ಚನ್ನಕೇಶವ, ಹಂಪೆಯ ಸರಸ್ವತಿ ದೇವಾಲಯಗಳಲ್ಲಿ ಈ ರೀತಿಯ ಪ್ರವೇಶ ದ್ವಾರಗಳಿವೆ. ನವರಂಗದ ಒಳಗೆ ಮಧ್ಯಭಾಗದಲ್ಲಿ ವೇದಿಕೆಯು ಇರುವುದು ಇದರ ಮಧ್ಯ ಭಾಗದಲ್ಲಿ ವೃತ್ತಾಕಾರದ ರಚನೆ ಇರುವುದು. ಈ ವೇದಿಕೆಯ ನಾಲ್ಕು ತುದಿಗಳಲ್ಲಿ ಪ್ರಧಾನವಾದ ನಾಲ್ಕು ಸ್ತಂಬಗಳಿರುತ್ತವೆ. ಈ ನಾಲ್ಕು ಕಂಬಗಳ ನೇರದಲ್ಲಿ ನೃತ್ಯ ಮಂಟಪದ ಸುತ್ತ ಹನ್ನೆರಡು ಸ್ತಂಭಗಳಿರುತ್ತವೆ ನೃತ್ಯಮಂಟಪದ ಮದ್ಯದಲ್ಲಿರುವ ನಾಲ್ಕು ಪ್ರಧಾನ ಸ್ತಂಬಗಳಿಂದಾದ ಮಧ್ಯದ ಚೌಕಟ್ಟಿನಲ್ಲಿ ಮೇಲ್ಭಾವಣಿಯ ಒಳಮುಖದಲ್ಲಿ ಒಂದು ಅಂಕಣ ಅಗಲದ ವಿತ್ತಾನ ವೇರ್ಪಡುವುದು. ಇದೇ ಕಂಬಗಳು ಸುತ್ತಲೂ ಇರುವ ಕಂಬಗಳೊಂದಿಗೆ ಸೇರುವಂತೆ ಮೇಲೆ ಚೌಕಟ್ಟನ್ನು ರಚಿಸಿದಾಗ ಇಂತಹ ಒಂಬತ್ತು ಅಂಕಣಗಳೇರ್ಪಡುತ್ತವೆ. ಹೀಗೆ ಒಟ್ಟು ಒಂಬತ್ತು ಅಂಕಣಗಳು ಅಂಕಣಗಳಾಗುವುದರಿಂದ ಈ ಮಂಟಪಕ್ಕೆ ನವರಂಗ ಎಂದು ಹೆಸರು ಬಂದಿದೆ. ನೃತ್ಯ ಮಂಟಪದ ಭಿತ್ತಿಯಲ್ಲಿ ಕೆಲವೊಮ್ಮೆ ಕೋಷ್ಟಗಳಿರುತ್ತವೆ. ಈ ರಚನೆಯು ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಹಾಗೆ ಕೆಲವು ದೇವಾಲಯಗಳಲ್ಲಿ ನೃತ್ಯ ಮಂಟಪದಲ್ಲಿ ಸುತ್ತಕೂರಲು ಕಕ್ಷಾಸನವೂ ಇರುವುದು.[೬೮] ದೇವಾಲಯಗಳಲ್ಲೆಲ್ಲಾ ಹೆಚ್ಚು ಅಲಂಕೃತಗೊಂಡಿರುವ ಮಂಟಪವೆಂದರೆ ನವರಂಗವೇ ಈ ಮಂಟಪದಲ್ಲಿ ವಿವಿಧ ರೀತಿಯಲ್ಲಿ ಅಲಂಕೃತಗೊಂಡ ದ್ವಾರ, ವಿಶೇಷಅಲಂಕೃತ ಮಧ್ಯಸ್ಥಂಭಗಳು ಮತ್ತು ವಿತಾನವು ಇರುತ್ತದೆ ನವರಂಗದ ಮೇಲಂಚಿನಲ್ಲಿ ಸುತ್ತಲೂ ಕೆಲವೊಮ್ಮೆ ಪದ್ಮದಳಗಳ ಅಲಂಕರಣವಿರುತ್ತದೆ. ಉದಾ: ತಾವರೆಕೆರೆಯ ಸೋಮೇಶ್ವರ ದೇವಾಲಯ.

## ೪) ಮುಖಮಂಟಪ

ಮುಖಮಂಟಪವು ದೇವಾಲಯದ ಮುಂಭಾಗದಲ್ಲಿರುವ ಮಂಟಪ.ನೃತ್ಯಮಂಟಪದ ಮುಂದಿನ ಭಾಗ ಇದನ್ನು ಅಗ್ರಮಂಟಪವೆಂದೂ ಹೇಳುವರು. ಉದಾ:- ಬಾದಾಮಿಯ ಜಂಬುಲಿಂಗೇಶ್ವರ, ಲಕ್ಕುಂಡಿಯ ಬ್ರಹ್ಮ ಜಿನಾಲಯ ದೇವಾಲಯಗಳು ಮುಖಮಂಟಪವನ್ನು ಹೊಂದಿದೆ. ಸಾಮಾನ್ಯವಾಗಿ ತೆರೆದ ಮಂಟಪದಂತಿರುವುದಾದರೂ ಕೆಲವೊಮ್ಮೆ ದ್ವಾರಯುಕ್ತವಾಗಿರುವುದು. ಹಾಗೆ ಮುಖಮಂಟಪದಲ್ಲಿ ನೃತ್ಯ ಮಂಟಪದಂತೆಯೇ ಸ್ತಂಭ, ವಿತಾನ, ಅಲಂಕರಣಗಳೂ ಇರುವವು. ಕೆಲವೊಮ್ಮೆ ಪ್ರತ್ಯೇಕ ಅಧಿಷ್ಠಾನದ ಮೇಲೆ ಕಟ್ಟಲ್ಪಡುವ ಮುಖಮಂಟಪದಲ್ಲಿ ನಾಲ್ಕಕ್ಕಿಂತ ಹೆಚ್ಚು ಕಂಬಗಳು ಇರುತ್ತವೆ. ಕುಳಿತುಕೊಳ್ಳಲು ಎರಡೂ ಬದಿಯಲ್ಲಿ ಕಲ್ಲಿನ ಆಸನಗಳಿರುತ್ತವೆ. ಇದು ಎತ್ತರವಾದ ಕಟ್ಟೆಯನ್ನು ಅದಕ್ಕೆ ಸೇರಿದಂತೆ ಒರಗು ಬೆನ್ನಿನಂತಹ ಒಂದು ಅಂಗವನ್ನು ಹೊಂದಿರುವುದು. ಇವುಗಳಿಗೆ ಕಕ್ಷಾಸನ ಎಂದು ಹೆಸರು. ಈ ಕಕ್ಷಾಸನದ ಹೊರಮುಖದಲ್ಲಿ ಪುಷ್ಪಪಟ್ಟ, ರತ್ನಪಟ್ಟ, ಪೂರ್ಣಘಟ (ಕಳಶ)ಗಳನ್ನು ಬಿಡಿಸಲಾಗಿರುತ್ತದೆ. ಈ ಭಾಗದಲ್ಲಿ ರಾಮಾಯಣ, ಮಹಾಭಾರತ, ಭಾಗವತ ಮುಂತಾದ ಕಥೆಗಳನ್ನು ಬಿಡಿಸಲಾಗಿರುತ್ತದೆ. ಹೀಗೆ ಕಕ್ಷಾಸನದ ಅಲಂಕಾರವೂ ಕೂಡ ಕಾಲದೊಂದಿಗೆ ಬದಲಾವಣೆ ಹೊಂದಿದ್ದನ್ನು ಇಲ್ಲಿ ಗುರುತಿಸಬಹುದು. ಅಂತೆಯೇ ವಿಜಯನಗರಕಾಲದ ದೇವಾಲಯಗಳಲ್ಲಿ ಕಕ್ಷಾಸನ ಹೆಚ್ಚಾಗಿ ಇರುವುದಿಲ್ಲ.[೧೯]

ನೃತ್ಯ ಮಂಟಪ ಮುಖಮಂಟಪಗಳ ಛಾವಣಿಯ ಮೇಲ್ಭಾಗದಲ್ಲೂ ವಿಶೇಷ ರೀತಿಯ ವಾಸ್ತುರಚನೆಗಳನ್ನು ಕಾಣಬಹುದು. ಈ ರೀತಿಯ ರಚನೆಯು ಕೆಲವು ದೇವಾಲಯಗಳಲ್ಲಿ ಮಾತ್ರ ಇರುತ್ತದೆ. ಅರಸಿಕೇರೆಯ ಶಿವಾಲಯದ ಈ ಭಾಗದಲ್ಲಿ ಬೃಹದಾಕಾರದ ಗುಮ್ಮಟದಂತಹ ರಚನೆಯು ಛಾವಣಿಯ ಬಹುಭಾಗವನ್ನಾವರಿಸಿದ್ದು. ಅದು ಘಂಟೆಯಂತೆ ಬಾಗಿರುವುದು ಇದನ್ನು 'ಘಂಟೆಸವರಣ' ಎಂದು ಗುರುತಿಸಲಾಗಿದೆ.[೨೦]

ಇದುವರೆಗೂ ವಿವರಿಸಿದ ಮಂಟಪಗಳು ಸಾಮಾನ್ಯವಾಗಿ ಎಲ್ಲಾ ದೇವಾಲಯಗಳಲ್ಲೂ ಇರುತ್ತವೆ. ಆದರೆ ಪೂಜಾವಿಧಿಗಳು, ಆಶಯ ಮತ್ತು ಅವಶ್ಯಕತೆಗಳು ಬೆಳೆದಂತೆ ಇನ್ನೂ ಅನೇಕ ಮಂಟಪಗಳು ರಚನೆಗೊಂಡಿರುತ್ತವೆ. ಇವುಗಳಲ್ಲಿ ಮುಖ್ಯವಾದವುಗಳು. ನಂದಿಮಂಟಪ, ಕಲ್ಯಾಣ ಮಂಟಪ ಮತ್ತು ರಂಗಮಂಟಪಗಳಿವೆ. ಈ ಎಲ್ಲಾ ಮಂಟಪಗಳೂ ಸಾಲಂಕೃತ ಕಂಬ, ವಿತಾನ, ದ್ವಾರ ಮತ್ತು ತೋರಣಗಳಿಂದಲೂ ಕೂಡಿದ್ದು ಮುಂದೆ ಸೋಪಾನ ರಚನೆಯು ಇರುವುದು. ಒಟ್ಟಾರೆಯಾಗಿ ಹೇಳುವುದಾದರೆ ದೇವಾಲಯಗಳ ಉಗಮ ಮತ್ತು ವಿಕಾಸವು ಹಂತ-ಹಂತವಾಗಿ ಬೆಳವಣಿಗೆಯಾಗಿರುವುದನ್ನು ಕಾಣಬಹುದು. ಹಾಗೂ ಈ ಮೇಲ್ಕಂಡ ಪ್ರಮುಖ ಲಕ್ಷಣಗಳಿಂದ ದೇವಾಲಯದ ಸಮಗ್ರ ರೂಪವನ್ನು ತಿಳಿಯಲು ಸಾಧ್ಯವಾಗಿದೆ. ಈ ಎಲ್ಲಾ ಲಕ್ಷಣಗಳನ್ನು ಸಾಮಾನ್ಯವಾಗಿ ಎಲ್ಲಾ ದೇವಾಲಯಗಳಲ್ಲಿಯೂ ಕಾಣಬಹುದು. ಈ ವಿವರಗಳಿಂದ ದೇವಾಲಯದ ಅಂಗಗಳ ಸ್ಥೂಲ ಚಿತ್ರಣವನ್ನು ಕಾಣಲು ಸಾಧ್ಯವಾಗುತ್ತದೆ.

**ಕೊನೆಟಿಪ್ಪಣಿಗಳು**

೧. ಅಪರ್ಣ ಕೂ.ಸ. ದೇವಾಲಯ ವಾಸ್ತುಶಿಲ್ಪ ಪರಿಚಯ, ಪು.೧.

೨. ಅದೇ ಪು.೧.

೩. ಅದೇ ಪು. ೧–೨.

೪. ಗೋಪಾಲ ಬಾ.ರಾ. ಕರ್ನಾಟಕದ ಕಲೆಗಳು (ವಾಸ್ತು), ಸಂಪು೧–೪, ಪು. ೧.

೫. ಅದೇ ಪು. ೧–೨.

೬. ಪ್ರಭಾಕರ ಎಂ.ಎನ್. ದೇವಾಲಯ ವಾಸ್ತು ಚಂದ್ರಿಕೆ, ಪು. ೧–೨.

೭. ಗೋಪಾಲ ಬಾ.ರಾ. ಪೂರ್ವೋಕ್ತ, ಪು. ೧–೨.

೮. ಅದೇ ಪು. ೧.

೯. ರಮೇಶ ನಾಯಕ ವಾಸ್ತು ಮತ್ತು ಮೂರ್ತಿ ಶಿಲ್ಪ, ಕುರುಗೋಡು (ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ–೧) ಬಾಲಸುಬ್ರಹ್ಮಣ್ಯ (ಸಂ.) ಪು.೮೮.

೧೦. ಸುರೇಶ ಕೆ.ಎಂ. ಮತ್ತು ಇತರರು : ಕರ್ನಾಟಕ ದೇವಾಲಯ ಕೋಶ : ಕೊಪ್ಪಳ ಜಿಲ್ಲೆ, ಪು. ೮.

೧೧. ಜ್ಞಾನಾನಂದ ಜಿ., ಶಿಲ್ಪಾದರ್ಶ, ಸಂಪು೧–೨, ಪು.೭.

೧೨. ಸುರೇಶ ಕೆ.ಎಂ. ಮತ್ತು ಇತರರು, : ಪೂರ್ವೋಕ್ತ, ಪು.೯.

೧೩. ಜ್ಞಾನಾನಂದ ಜಿ. ಪೂರ್ವೋಕ್ತ, ಪು. ೬.

೧೪. ಅದೇ ಪು. ೧೬.

೧೫. ಅದೇ ಪು. ೨೩.

೧೬. ಅದೇ ಪು. ೩೯.

೧೭. ಅದೇ ಪು. ೮೯.

೧೮. ಅದೇ ಪು. ೮೮–೮೯.

೧೯. ಸುರೇಶ ಕೆ.ಎಂ. ಮತ್ತು ಇತರರು, : ಪೂರ್ವೋಕ್ತ, ಪು. ೧೫.

೨೦. ಜ್ಞಾನಾನಂದ ಜಿ. ಪೂರ್ವೋಕ್ತ, ಪು. ೯೮.

೨೧. ತಿಪ್ಪೇರುದ್ರಸ್ವಾಮಿ ಹೆಚ್. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು. ೫೩೪.

೨೨. ಸುರೇಶ ಕೆ.ಎಂ. ಮತ್ತು ಇತರರು, : ಪೂರ್ವೋಕ್ತ, ಪು. ೧೫.

೨೩. ರಾಜಶೇಖರ್ ಎಸ್. ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಪು. ೬.

೨೪. ಅದೇ ಪು. ೮.

೨೫. ರಘುನಾಥ ಭಟ್ ಎಚ್.ಆರ್. ಆದಿಕದಂಬರ ವಾಸ್ತುಶಿಲ್ಪಕಲೆ, ಶಿಲ್ಪಕಲಾ ಪ್ರಪಂಚ, ತಿಪ್ಪೇರುದ್ರಸ್ವಾಮಿ ಪಿ.ಆರ್. (ಪ್ರಸಂ.), ಪು. ೧೪೭–೧೪೮.

೨೬. ರಾಜಶೇಖರ ಎಸ್. ಪೂರ್ವೋಕ್ತ, ಪು. ೧೫–೧೭.

೨೭. ತಿಪ್ಪೇರುದ್ರಸ್ವಾಮಿ ಹೆಚ್. ಪೂರ್ವೋಕ್ತ. ಪು. ೫೩೪.

೨೮. ರಾಜಶೇಖರ್ ಎಸ್. ಪೂರ್ವೋಕ್ತ, ಪು. ೧೨–೧೩.

೨೯. ಸುರೇಶ ಕೆ.ಎಂ. ಮತ್ತು ಇತರರು, ಪೂರ್ವೋಕ್ತ, ಪು. ೧೭.

೩೦. ಶಿಲಾಕಾಂತ ಪತ್ತಾರ ಬಾದಾಮಿ, ಪು. ೧೩.

೩೧. ಅದೇ ಪು. ೨೭.

೩೨. ರಾಜಶೇಖರ ಎಸ್. ಪೂರ್ವೋಕ್ತ, ಪು. ೩೦.

೩೩. ಶಿಲಾಕಾಂತ ಪತ್ತಾರ ಪೂರ್ವೋಕ್ತ, ಪು. ೯೩.

೩೪. ಅದೇ ಪು. ೩.

೩೫. ರಾಜಶೇಖರ್ ಎಸ್. ಪೂರ್ವೋಕ್ತ, ಪು. ೯೩.

೩೬. ಅದೇ ಪು. ೯೧.

೩೭. ಅದೇ ಪು. ೯೩.

೩೮. ಅದೇ ಪು. ೯೯.

೩೯. ಅದೇ ಪು. ೧೦೩.

೪೦. ಅದೇ ಪು. ೧೧೧–೧೧೨.

೪೧. ಜ್ಞಾನಾನಂದ ಜಿ. ಪೂರ್ವೋಕ್ತ, ಪು. ೧೬೫.

೪೨. ಕರ್ನಾಟಕ ಸಾಂಸ್ಕೃತಿಕ ಇತಿಹಾಸ ಪರಂಪರೆ, ಪು. ೩೯–೪೦.

೪೩. ರಾಜಶೇಖರ್ ಎಸ್. ಪೂರ್ವೋಕ್ತ, ಪು. ೧೨೫–೧೨೯.

೪೪. ಜ್ಞಾನಾನಂದ ಜಿ. ಪೂರ್ವೋಕ್ತ, ಪು. ೧೬೫.

೪೫. ರಾಜಶೇಖರ್ ಎಸ್. ಪೂರ್ವೋಕ್ತ, ಪು. ೧೩೨.

೪೬. ಅದೇ ಪು. ೧೩೩.

೪೭. ಅದೇ ಪು. ೧೩೪.

೪೮. ಅದೇ ಪು. ೧೪೦.

೪೯. ಜ್ಞಾನಾನಂದ ಜಿ. ಪೂರ್ವೋಕ್ತ, ಪು. ೧೬೬.

೫೦. ರಾಜಶೇಖರ್ ಎಸ್. ಪೂರ್ವೋಕ್ತ, ಪು. ೧೫೧–೧೫೨.

೫೧. ಅದೇ ಪು. ೧೯೭.

೫೨. ರಾಜಶೇಖರ್ ಎಸ್. ಪೂರ್ವೋಕ್ತ, ಪು. ೧೭೪.

೫೩. ಜ್ಞಾನಾನಂದ ಜಿ. ಪೂರ್ವೋಕ್ತ, ಪು. ೧೯೮.

೫೪. ಅದೇ ಪು. ೧೯೮–೧೯೯.

೫೫. ರಾಜಶೇಖರ್ ಎಸ್. ಪೂರ್ವೋಕ್ತ, ಪು. ೧೭೭.

೫೬. ಅದೇ ಪು. ೧೭೬.

೫೭. ಅದೇ ಪು. ೧೭೬–೧೭೭.

೫೮. ಪ್ರಭಾಕರ ಎಂ.ಎಸ್. ಪೂರ್ವೋಕ್ತ, ಪು. ೩೩.

೫೯. ಅಪರ್ಣ ಕೂ.ಸ. ಪೂರ್ವೋಕ್ತ, ಪು.೩.

೬೦. ಇತಿಹಾಸ ದರ್ಶನ ಸಂ.೩, ಪು. ೬೬.

೬೧. ಮಯಮತ ೧೯, ಪು. ೬೩–೬೬.

೬೨. ಅಪರ್ಣ ಕೂ.ಸ. ಪೂರ್ವೋಕ್ತ, ಪು.೪೫.

೬೩. ಮಯಮತ ೧೯, ಪು. ೨೧–೬೭.

೬೪. ಅಪರ್ಣ ಕೂ.ಸ. ಪೂರ್ವೋಕ್ತ, ಪು.೪೯.

೬೫. ಅದೇ ಪು. ೪೯.

೬೬. ಅದೇ ಪು. ೬೭–೬೮.

೬೭. ಬೃಹತ್ ಸಂಹಿತ Vol.–೨೭

೬೮. ಅಪರ್ಣ ಕೂ.ಸ. ಪೂರ್ವೋಕ್ತ, ಪು.೭೩.

೬೯. ಮಯಮತ (೨೫:೩೦–೩೧) ರಲ್ಲಿ ಇದರ ಉಲ್ಲೇಖ.

೭೦. ಅಪರ್ಣ ಕೂ.ಸ. ಪೂರ್ವೋಕ್ತ, ಪು.೮೦.

## ಅಧ್ಯಾಯ-೪

# ಅರಸೀಕೆರೆ ಪರಿಸರದ ದೇವಾಲಯಗಳು

೪.೧. ಶೈವ ದೇವಾಲಯಗಳು

೪.೨. ವೈಷ್ಣವ ದೇವಾಲಯಗಳು

೪.೩. ಜೈನ ದೇವಾಲಯಗಳು

೪.೪. ಶಾಕ್ತ ದೇವಾಲಯಗಳು

೪.೫. ಮೂರ್ತಿಶಿಲ್ಪಗಳು

೪.೫.೧. ಶೈವ ಮೂರ್ತಿಶಿಲ್ಪಗಳು

೪.೫.೨. ವೈಷ್ಣವ ಮೂರ್ತಿಶಿಲ್ಪಗಳು

೪.೫.೩. ಶಾಕ್ತ ಮೂರ್ತಿಶಿಲ್ಪಗಳು

# ಅಧ್ಯಾಯ–೪

## ಅರಸೀಕೆರೆ ಪರಿಸರದ ದೇವಾಲಯಗಳು

ದೇವಾಲಯಗಳು ಚರಿತ್ರೆಯ ರಚನೆಗೆ ಸಹಾಯಕವಾಗಬಲ್ಲ ಬಹುಮುಖ್ಯ ಪುರಾತತ್ವೀಯ ಆಕರಗಳು. ಇವುಗಳ ಅಧ್ಯಯನದಿಂದ ಆಯಾ ಪರಿಸರದ ಮಾನವನ ಚರಿತ್ರೆ ಹಾಗೂ ಕಾಲದ ವಿಭಿನ್ನ ಸಂಸ್ಕೃತಿಯ ಪರಿಚಯ ನಮಗೆ ಆಗುತ್ತದೆ. ಜೊತೆಗೆ ಆಯಾ ದೇವಾಲಯಗಳ ಕಲೆ, ವಾಸ್ತುಶಿಲ್ಪ, ಮೂರ್ತಿಶಿಲ್ಪ ಅವುಗಳ ರಚನೆಯ ವಿಶಿಷ್ಟತೆ ಅಂದಿನ ವಾಸ್ತುಶಿಲ್ಪಿಗಳ ಕುಶಲತೆ, ತಾಂತ್ರಿಕ ಜ್ಞಾನ, ಅವರ ಕಲಾಭಿರುಚಿ, ಅದಕ್ಕೆ ನೀಡಿದ ಪ್ರಾಧಾನ್ಯತೆ ಮುಂತಾದ ಹತ್ತು ಹಲವು ಸಂಗತಿಗಳನ್ನು ದೇವಾಲಯಗಳ ಅಧ್ಯಯನದಿಂದ ತಿಳಿಯಬಹುದು.

ಈ ದೃಷ್ಟಿಯಿಂದ ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕು "ಪ್ರಾಚೀನ ದೇವಾಲಯಗಳಿಗೆ ಸಂಬಂಧಿಸಿದಂತೆ ಕಣಜವೆಂದು" ಹೇಳಬೇಕು. ಅರೆಮಲೆನಾಡು ಪ್ರಾಂತ್ಯವಾಗಿರುವ ಈ ಭಾಗದಲ್ಲಿ ಹಲವಾರು ಪ್ರಬಲ ಹಾಗೂ ಚಿಕ್ಕಪುಟ್ಟ ಅರಸು ಮನೆತನಗಳು ಚರಿತ್ರೆ ಹಾಗೂ ಸಂಸ್ಕೃತಿಯ ಕುರುಹುಗಳೊಂದಿಗೆ ಅವುಗಳನ್ನು ಪ್ರತಿಬಿಂಬಿಸುವ ಸ್ಮಾರಕಗಳಲ್ಲಿ ದೇವಾಲಯಗಳು ಸಹ ಬಹುಮುಖ್ಯವಾಗಿವೆ. ಅರಸೀಕೆರೆ ತಾಲೂಕು ಪರಿಸರದಲ್ಲಿ ಸಹಸ್ರ ಸಂಖ್ಯೆಯ ಪ್ರಾಚೀನ ದೇವಾಲಯಗಳು ಉಳಿದು ಬಂದಿವೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಹಾಕಿಕೊಂಡ ವ್ಯಾಪ್ತಿಗೆ ಅನುಗುಣವಾಗಿ ಅಂದರೆ ಕಸಬ ಹೋಬಳಿಯ ಗ್ರಾಮಗಳನ್ನು ಹಾಗೂ ಅರಸೀಕೆರೆ ನಗರವನ್ನೊಳಗೊಂಡಂತೆ ಕ್ಷೇತ್ರ ಕಾರ್ಯದ ಮೂಲಕ ಕಂಡು ಬಂದಿರುವ ಪ್ರಾಚೀನ ದೇವಾಲಯಗಳನ್ನು ಮಾತ್ರ ಅಧ್ಯಯನ ಮಾಡಲಾಗಿದೆ.

ಅರಸೀಕೆರೆ ಪರಿಸರದಲ್ಲಿ ಹೊಯ್ಸಳ ಶೈಲಿಯ ದೇವಾಲಯಗಳಿಂದ ಹಿಡಿದು ಪಾಳೆಯಗಾರರ ಶೈಲಿಯ ದೇವಾಲಯಗಳವರೆಗೂ ಕಾಣಬಹುದು. ಇವುಗಳಲ್ಲಿ ಮುಖ್ಯವಾಗಿ ಹೊಯ್ಸಳ ವಿಜಯನಗರ ಹಾಗೂ ಪಾಳೆಯಗಾರರ ಕಾಲದ ದೇವಾಲಯಗಳು ಕಂಡುಬರುತ್ತವೆ.

ಹೊಯ್ಸಳರು ಹಾಸನ ಜಿಲ್ಲೆಯಲ್ಲಿ ಕೆಲಕಾಲ ಆಳ್ವಿಕೆ ನಡೆಸಿದ್ದಾರೆ. ಈ ಪ್ರದೇಶಗಳಲ್ಲಿ ಹೊಯ್ಸಳ ಕಲೆ, ವಾಸ್ತುಶಿಲ್ಪ, ಮೂರ್ತಿಶಿಲ್ಪಗಳಿಂದ ಕೂಡಿದ ಹಲವು ದೇವಾಲಯಗಳನ್ನು ಕಾಣಬಹುದು. ಕ್ರಿ.ಶ. ೧೧ನೇ ಶತಮಾನದಿಂದ ೧೪ನೇ ಶತಮಾನವದವರೆಗೆ ಕರ್ನಾಟಕವಲ್ಲದೆ ದಕ್ಷಿಣ ಭಾರತದ ಬಹುಭಾಗಗಳಲ್ಲಿ ಆಳಿದ ಇವರು ತಮ್ಮ ರಾಜಕೀಯ ಚರಿತ್ರೆ, ಸಾಂಸ್ಕೃತಿಕವಾದ ಕಲೆ, ಮೂರ್ತಿಶಿಲ್ಪ, ವಾಸ್ತುಶಿಲ್ಪ ಇತರ ಅಂಶಗಳಿಂದಾಗಿ ಕರ್ನಾಟಕದ ಚರಿತ್ರೆಯಲ್ಲಿ ಬಹು ಮುಖ್ಯವಾದ ಪಾತ್ರವನ್ನು ವಹಿಸಿದೆ. ಹೊಯ್ಸಳ ರಾಜರು ಈ ಪ್ರದೇಶವನ್ನು ಅನೇಕ ವರ್ಷಗಳ ಕಾಲ ಆಳ್ವಿಕೆ ನಡೆಸಿದ್ದಾರೆ. ಇದರ ಫಲವಾಗಿ ಅವರ ಶಿಲಾಶಾಸನಗಳು ಹಾಗೂ ವಾಸ್ತುಶಿಲ್ಪ ಕಟ್ಟಡಗಳು ಕಂಡು ಬಂದಿವೆ. ಈ ಹಿಂದೆಯೇ ಇದ್ದ ವಾಸ್ತುಶಿಲ್ಪ ಕಟ್ಟಡಗಳಿಗೂ ದಾನ ದತ್ತಿಗಳನ್ನು ಕೊಟ್ಟು ಅವುಗಳನ್ನು ಊರ್ಜಿತಗೊಳಿಸಿ ತಮ್ಮದೇ

ಆದ ಕಲೆಯ ಕೊಡುಗೆಯನ್ನು ನೀಡಿದ್ದಾರೆ. ಹುಲ್ಲೇಕೆರೆಯ ಚನ್ನಕೇಶವ ದೇವಾಲಯವು ಹೊಯ್ಸಳರ ಕಾಲದಲ್ಲಿ ವಿಸ್ತಾರವಾಯಿತು. ಹಾರನಹಳ್ಳಿಯ ಸೋಮೇಶ್ವರ, ಕೇಶವ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿದ್ದಾರೆ. ಇಷ್ಟೇ ಅಲ್ಲದೆ ಈ ಪರಿಸರದಲ್ಲಿ ಬಹುಪಾಲು ಹೊಯ್ಸಳ ಕಾಲದ ಹಾಗೂ ಅವರ ವಾಸ್ತುಶಿಲ್ಪದ ದೇವಾಲಯಗಳು ಕಂಡು ಬರುತ್ತವೆ.

ಅದೇ ರೀತಿ ಅರಸೀಕೆರೆ ಪರಿಸರದಲ್ಲಿ ವಿಜಯನಗರ ಅರಸರ ಕಾಲದ ಶಾಸನಗಳು, ದೇವಾಲಯಗಳು ಹಾಗೂ ಇತರ ಪ್ರಾಚ್ಯ ಅವಶೇಷಗಳನ್ನು ಕಾಣಬಹುದು. ಅವರ ಕಾಲದಲ್ಲಿ ಗ್ರಾನೈಟ್ ಶಿಲೆಯಿಂದಲೇ ಹಲವು ದೇವಾಲಯಗಳನ್ನು ನಿರ್ಮಿಸಿದ್ದಾರೆ. ಅದರೊಂದಿಗೆ ಈ ಮುಂಚಿನ ದೇವಾಲಯಗಳನ್ನು ಜೀರ್ಣೋದ್ಧಾರಗೊಳಿಸಿದ್ದಾರೆ. ತದನಂತರದಲ್ಲಿ ಪಾಳೆಯಗಾರರ ಕಾಲದಲ್ಲಿ ಸಾಕಷ್ಟು ದೇವಾಲಯಗಳು ಅರಸೀಕೆರೆ ಪರಿಸರದಲ್ಲಿ ನಿರ್ಮಾಣಗೊಂಡಿವೆ. ಅದರೊಂದಿಗೆ ಈ ಮುಂಚಿನ ದೇವಾಲಯಗಳನ್ನು ಜೀರ್ಣೋದ್ಧಾರಗೊಳಿಸಿರುವ ಬಗ್ಗೆ ಹಲವು ಶಾಸನಗಳು ಮಾಹಿತಿ ನೀಡುತ್ತವೆ. ದೇವಾಲಯಗಳ ತಳವಿನ್ಯಾಸ, ಗರ್ಭಗೃಹ, ಅಂತರಾಳ, ರಂಗಮಂಟಪ ಹಾಗೂ ಮುಖಮಂಟಪಗಳ ರಚನೆಗಳನ್ನು ಕಾಣಬಹುದು. ಅದರೊಂದಿಗೆ ದೇವಾಲಯಗಳ ವಾಸ್ತುಶೈಲಿಯು ಸರಳವಾಗಿರುವುದನ್ನು ಗಮನಿಸಬಹುದು.

ಅರಸೀಕೆರೆ ಪರಿಸರದ ಕ್ಷೇತ್ರಕಾರ್ಯದಲ್ಲಿ ಕಂಡು ಬಂದ ಪ್ರಾಚೀನ ದೇವಾಲಯಗಳನ್ನು ಧಾರ್ಮಿಕ ದೃಷ್ಟಿಕೋನದಿಂದ ಶೈವ ದೇವಾಲಯಗಳು, ವೈಷ್ಣವ ದೇವಾಲಯಗಳು, ಜೈನ ದೇವಾಲಯಗಳು ಹಾಗೂ ಶಾಕ್ತ ದೇವಾಲಯಗಳು ಎಂದು ವರ್ಗೀಕರಿಸಿಕೊಂಡು ಈ ಕೆಳಗಿನಂತೆ ಆ ದೇವಾಲಯಗಳಿಗೆ ಸಂಬಂಧಿಸಿದಂತೆ ಹಲವು ಸಂಗತಿಗಳನ್ನು ವಿವರಿಸಲು ಪ್ರಯತ್ನಿಸಲಾಗಿದೆ.

### ೪.೧ ಶೈವ ದೇವಾಲಯಗಳು

ಶೈವಾರಾಧನೆ ಭಾರತದ ಪ್ರಾಚೀನ ಆರಾಧನೆಗಳಲೊಂದಾಗಿದ್ದು, ಸಿಂಧೂ ನಾಗರೀಕತೆ ಮತ್ತು ವೈದಿಕ ಯುಗಗಳಲ್ಲಿಯೇ ಈ ಕುರಿತು ಕುರುಹುಗಳು ಲಭ್ಯವಾಗಿವೆ. ತರುವಾಯದಲ್ಲಿ ಇದು ಹಲವು ಪಂಥಗಳಾಗಿ ಬೆಳೆದು ಭಾರತದಾದ್ಯಂತ ಹರಡಿತು. ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಶೈವಧರ್ಮ ಪ್ರಾಬಲ್ಯವಾಗಿದ್ದು, ಈ ಸಂಬಂಧಿತ ಸ್ಮಾರಕಗಳ ಬಾಹುಳ್ಯವೇ ಇದನ್ನು ಸ್ಪಷ್ಟಪಡಿಸುತ್ತದೆ. ಹಾಗಾಗಿ ಶೈವ ದೇವಾಲಯಗಳನ್ನು ಹೆಚ್ಚಾಗಿ ಕಾಣಬಹುದು.

#### ೪.೧.೧ ಬಲ್ಲಾಳೇಶ್ವರ ದೇವಾಲಯ

ಈ ದೇವಾಲಯವು ಇತಿಹಾಸ ಪ್ರಸಿದ್ಧ ಸ್ಥಳವಾದ ಅರಸೀಕೆರೆಯಲ್ಲಿದೆ. ಸುಮಾರು ೧೦-೧೧ನೇ ಶತಮಾನದಿಂದಲೂ ಆಳರಸರ ನೆಲೆವೀಡಾಗಿದ್ದು ಹಲವು ವಿದ್ಯಮಾನಗಳಿಗೆ ಹೆಸರುವಾಸಿಯಾಗಿರುವುದು ಶಾಸನದಿಂದ ತಿಳಿಯುತ್ತದೆ. ೧೧ನೇಯ ಶತಮಾನದಲ್ಲಿ ಹೊಯ್ಸಳ ವಿನಿಯಾದಿತ್ಯನಿಗೆ ಈ ಪ್ರದೇಶ ಸೇರಿದ್ದು, ಹುಲಿಯನ್ನು ಕೊಲ್ಲುತ್ತಿರುವ ಲಾಂಛನವನ್ನು ಹೊಂದಿದ್ದರಿಂದ 'ಪುಲ್ಲರಸಿಕೆರೆ' ಎಂದು ಕರೆಯಲಾಗಿದೆ ಅನಂತರ 'ಬಲ್ಲಾಳಪುರ' ಎಂದು ಕರೆಯಲಾಗುತ್ತಿತ್ತು.[೧]

ಈ ದೇವಾಲಯವು ನಗರದಿಂದ ಪೂರ್ವಕ್ಕೆ ಸುಮಾರು ೧ ೧/೨ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೨೨೦ರಲ್ಲಿ ೨ನೇ ಬಲ್ಲಾಳನ ಆಳ್ವಿಕೆಯ ಕೊನೆಯ ಭಾಗದಲ್ಲಿ ಈ ದೇವಾಲಯದ ನಿರ್ಮಾಣವಾಗಿದೆ. ಇದು ಏಕಕೂಟ ದೇವಾಲಯವಾಗಿದೆ. ಇದು ಪೂರ್ವಾಭಿಮುಖವಾಗಿದ್ದು, ನಕ್ಷತ್ರಾಕಾರದ ತಳವಿನ್ಯಾಸವನ್ನು ಹೊಂದಿದೆ. ದೇವಾಲಯವು ಗರ್ಭಗುಡಿ, ಸುಖನಾಸಿ, ನವರಂಗ ಹಾಗೂ ಮುಖಮಂಟಪವನ್ನು ಹೊಂದಿದೆ. ಮುಖ್ಯ ಗರ್ಭಗೃಹದ ಬಾಗಿಲುವಾಡವನ್ನು ನವಿರಾದ ಹೂಬಳ್ಳಿಗಳಿಂದ ಅಲಂಕರಿಸಲಾಗಿದ್ದು ಚೌಕಾಕಾರದ ಕಲ್ಲಿನ ಮುಂಚಾಚುವಿನಲ್ಲಿ ಗಜಲಕ್ಷ್ಮಿ ಅದರ ಮೇಲೆ ಶಿವ, ಬಲಭಾಗದಲ್ಲಿ ಗಣೇಶ, ಬ್ರಹ್ಮ ಎಡಭಾಗದಲ್ಲಿ ವಿಷ್ಣುವಿನ ಕಿರು ವಿಗ್ರಹಗಳಿವೆ. ಗರ್ಭಗುಡಿಯ ಮೇಲ್ಛಾವಣಿಯಲ್ಲಿ ಅಷ್ಟದಿಕ್ಪಾಲಕರು ನರ್ತಕರು. ಮಧ್ಯದಲ್ಲಿ ತಾಂಡವೇಶ್ವರ ಇದೆ. ಗರ್ಭಗುಡಿಯ ಒಳಗೆ ಸುಮಾರು ಎರಡು ಅಡಿ ಎತ್ತರದ ಶಿವಲಿಂಗವು ಇದೆ.

ಸುಖನಾಸಿಯು ಗರ್ಭಗೃಹ ಮತ್ತು ನವರಂಗದ ಮಧ್ಯ ಇರುತ್ತದೆ. ಈ ಸುಖನಾಸಿಯಲ್ಲಿ ನಂದಿ ವಿಗ್ರಹವಿದೆ. ಸುಖನಾಸಿಯಲ್ಲಿನ ಭುವನೇಶ್ವರಿಯಲ್ಲಿ ಎರಡು ಪಟ್ಟಿಕೆಗಳ ಅಲಂಕೃತ ಕೆತ್ತನೆಯು ಇಲ್ಲಿನ ವಿಶೇಷವಾಗಿದ್ದು ಮೊದಲನೆ ಪಟ್ಟಿಯಲ್ಲಿ ಮಹಾಭಾರತಕ್ಕೆ ಸಂಬಂಧಿಸಿದ ಋಷಿಯು ಪಾಂಡವರಿಗೆ ಪುಸ್ತಕವನ್ನೋದಿ ಪುರಾಣವನ್ನು ಹೇಳುತ್ತಿರುವನು. ಇದರ ಮೇಲಿನ ಸಾಲಿನಲ್ಲಿ ಸಮುದ್ರ ಮಂಥನ, ಶಿವತಾಂಡ, ಶಿವ ಪರಿವಾರ, ಕುಳಿತಿರುವ ದೇವತೆ ಹೀಗೆ ತಾಂಡವೇಶ್ವರನ ಸುತ್ತಲೂ ಅಷ್ಟದಿಕ್ಪಾಲಕರನ್ನು ಕಲ್ಪಿಸಿರುವುದು ಈ ದೇವಾಲಯದ ವಿಶೇಷ.

ನವರಂಗದ ಕಂಬಗಳ ಕೆಳಗೆ ಚೌಕಾಕಾರದ ಮೇಲೆ ವೃತ್ತಾಕಾರದಲ್ಲಿರುವ ಕಂಬಗಳನ್ನು ತಿರುಗುಣಿ ಯಂತ್ರದಿಂದ ತಯಾರಿಸಲಾಗಿದೆ ಅವುಗಳಲ್ಲಿ ಕೆಲವು ಹದಿನಾರು ಮೂಲೆಯ ಕಂಬಗಳಿವೆ. ಚೌಕಾಕಾರದ ಮುಂಭಾಗಗಳಲ್ಲಿ ಕಂಬ ತೋರಣಗಳಿರುವ ಅಲಂಕರಿಸಿದ ಕೂಡುಗಳಲ್ಲಿ ವಿಷ್ಣು, ಶಿವ, ದೇವಿ, ಯಕ್ಷಯಕ್ಷಿಯರ ವಿಗ್ರಹಗಳನ್ನು ರಚಿಸಲಾಗಿದೆ ನವರಂಗದ ಮೇಲ್ಛಾವಣಿಯ ಭುವನೇಶ್ವರಿಯಲ್ಲಿ ವಿಷ್ಣುವಿನ ೨೪ ಅವತಾರಗಳ ೧೧ ರುದ್ರಚಿತ್ರಗಳು ಇವೆ. ನವರಂಗದಲ್ಲಿನ ಮಹಿಷಮರ್ದಿನಿ ಮತ್ತು ನಂದಿ ವಿಜಯನಗರ ಕಾಲದ ವಿಗ್ರಹಗಳಾಗಿವೆ.

ಮುಕ್ತ ನವರಂಗವು ಹೊಯ್ಸಳ ದೇವಾಲಯಗಳಲ್ಲಿ ವಿಶೇಷವಾಗಿದೆ. ಒಳಾಂಗಣ ಸುಮಾರು ಇಪ್ಪತ್ತೈದು ಅಡಿಗಳಷ್ಟಿದ್ದು ಬೇಲೂರಿನ ದೇವಾಲಯದಂತೆ ಇಲ್ಲಿಯೂ ಸಹ ನೃತ್ಯಮಂಟಪವನ್ನು ಮೂರು ಇಂಚು ಎತ್ತರ ಹನ್ನೆರಡು ಅಡಿ ವಿಸ್ತೀರ್ಣವುಳ್ಳ ವೃತ್ತಾಕಾರದಲ್ಲಿ ನಿರ್ಮಾಣ ಮಾಡಲಾಗಿದೆ. ಇಲ್ಲಿಯ ಹದಿಮೂರು ಕಂಬಗಳನ್ನು ಯಂತ್ರದಿಂದ ದುಂಡಗೆ ಮಾಡಿದ್ದು ಮಧ್ಯದಲ್ಲಿರುವ ಎಂಟು ಕಂಬಗಳನ್ನು ಹೊಯ್ಸಳ ರೀತಿಯಲ್ಲಿ ಅಲಂಕರಿಸಿರುವರು. ಈ ಕಂಬಗಳ ಮೇಲಿನ ಭಾಗವನ್ನು ಅಷ್ಟಕೋನದಂತೆ ಕಡೆದು ಒಂದೊಂದು ಸಾಲಿನಲ್ಲಿ ವಿಗ್ರಹಗಳನಿಟ್ಟಿರುವ. ಇವುಗಳಲ್ಲಿ ನಂದೀಶ್ವರ, ಕುಬೇರ, ನರಸಿಂಹ, ಇವುಗಳ ಪಕ್ಕದಲ್ಲಿ ವಿಷ್ಣು, ಶಿವ, ದೇವಿ ವಿಗ್ರಹಗಳನ್ನು ಗುರುತಿಸಬಹುದು. ಅರೆಗಂಬಗಳು ಕಕ್ಷಾಸನದ

ಮೇಲೆ ಛಾವಣಿಗೆ ಹೊಂದಿಕೊಂಡಂತಿವೆ. ಕಕ್ಷಾಸನವು ಆನೆಗಳ ಮೇಲೆ ನಿರ್ಮಿತವಾಗಿರುವಂತೆ ಶೃಂಗರಿಸಲಾಗಿದೆ. ಇದರ ಭುವನೇಶ್ವರಿಯಲ್ಲಿ ೩½ ಅಡಿ ಉದ್ದದ ಕಮಲದ ಮೊಗ್ಗು ಜೋಲಾಡುವಂತಿದೆ.

ಮುಖಮಂಟಪವು ದೇವಾಲಯದ ತೆರೆದ ಮಂಟಪವನ್ನು ಹೊಂದಿದ್ದು, ನವರಂಗದ ಅಧಿಷ್ಠಾನ ಹದಿನಾರು ಕೋನಗಳ ನಕ್ಷತ್ರಾಕಾರ ಹೊಂದಿದೆ. ಮಂಟಪದಲ್ಲಿನ ನೀರು ಬೀಳುವ ಸೂರು ಸಹ ಹದಿನಾರು ಮೂಲೆಗಳನ್ನು ಒಳಗೊಂಡಿದೆ. ಪೂರ್ವಾಭಿಮುಖವಾಗಿರುವ ಮುಖಮಂಟಪವು ಮುಕ್ತ ನವರಂಗವಾಗಿರುವದರಿಂದ ಉತ್ತರ ಮತ್ತು ದಕ್ಷಿಣದಿಂದಲೂ ಪ್ರವೇಶಿಸಬಹುದು. ಇದು ಕೇವಲ ಎಂಟು ಅಡಿಗಳಾಗಿದ್ದು ನಾಲ್ಕು ಕಂಬಗಳನ್ನು ಒಳಗೊಂಡಿದೆ. ಒಂದು ಕಂಬವನ್ನು ಸುಂದರವಾಗಿ ಕೆತ್ತಿದ್ದು ಹುಲಿಯನ್ನು ಆನೆ ಮೆಟ್ಟಿನಿಂತಿರುವಂತೆ ಶಿಲ್ಪಿಸಲಾಗಿದೆ. ಕಂಬಗಳು ಗಂಟೆಯಾಕಾರದಲ್ಲಿ ಇದ್ದು ಮುಖಮಂಟಪದ ಮೇಲ್ಚಾವಣಿಯು ಎರಡು ಪಟ್ಟಿಕೆಗಳನ್ನು ಹೊಂದಿದೆ. ಮೊದಲನೆ ಭಾಗದಲ್ಲಿ ಅಷ್ಟದಿಕ್ಪಾಲಕರ ಚಿತ್ರಗಳಿದ್ದರೆ (ಇಂದ್ರ, ಅಗ್ನಿ, ಯಮ, ನಿರುತ್ತಿ, ವರುಣ, ವಾಯು, ಕುಬೇರ, ಈಶ) ಇವರ ನಡುವೆ ಕುಳಿತ ಲಕ್ಷ್ಮೀನಾರಾಯಣರ ಶಿಲ್ಪಗಳು ಕಂಡುಬರುತ್ತವೆ. ಎರಡನೆ ಪಟ್ಟಿಯಲ್ಲಿ ನರ್ತಕ, ನರ್ತಕಿಯರ, ವಾಧ್ಯಗಾರರು, ಸಂಗೀತಗಾರರಿಂದ ಕೂಡಿದೆ. ಮೇಲ್ಚಾವಣಿಯ ಭುವನೇಶ್ವರಿಯಲ್ಲಿ ತಾಂಡವ ಮೂರ್ತಿ ಶಿಲ್ಪವಿದ್ದು ಉಳಿದ ಎಂಟು ಭುವನೇಶ್ವರಿಗಳಲ್ಲಿ ಜಾಮಿತಿ ಆಕಾರದ ಚೌಕುಗಳನ್ನು ರಚಿಸಲಾಗಿದೆ.

ಅಧಿಷ್ಠಾನದಲ್ಲಿ ಯಕ್ಷ, ಯಕ್ಷಿಯರ ಉಬ್ಬುಶಿಲ್ಪಗಳಿವೆ. ಈ ದೇವಾಲಯವು ಜಗತಿ ಇರದ ದೇವಾಲಯವಾಗಿದ್ದು ಮೂರು ಅಡಿ ಎತ್ತರವಾಗಿದೆ ಹೊಯ್ಸಳ ಶೈಲಿಯ ಸಾಮಾನ್ಯ ಗುಣವಾದ ಅಲಂಕೃತ ಪಟ್ಟಿಕೆಗಳು ಇಲ್ಲಿ ಕಂಡು ಬರುವುದಿಲ್ಲ.

ಹೊರಭಿತ್ತಿಯು ಸಾಲಂಕೃತವಾಗಿದ್ದು, ಅಧಿಷ್ಠಾನದಿಂದ ಕಪೋತದವರೆಗೆ ನಕ್ಷತ್ರಾಕಾರದ ಕಂಬಗಳಿದ್ದು ಅವು ಪಾದದಿಂದ ಶಿಖರದವರೆಗೂ ಅಲಂಕೃತವಾಗಿದ್ದು. ತಳಭಾಗದಲ್ಲಿ ಯಕ್ಷನ ಉಬ್ಬುಶಿಲ್ಪಗಳಿದ್ದರೆ ಅಧಿಷ್ಠಾನದ ಮೇಲೆ ದೇವಬಿಂಬಗಳನ್ನು ಶಿಲ್ಪಿಸಲಾಗಿದೆ. ದೇವತಾ ಶಿಲ್ಪಗಳ ಎಡ ಮತ್ತು ಬಲಭಾಗಗಳಲ್ಲಿ ಚಿಕ್ಕ ಚಿಕ್ಕ ಶಿಖರಗಳಿವೆ. ಭಿತ್ತಿಯಲ್ಲಿ ನೂರಕ್ಕೂ ಅಧಿಕ ದೇವತಾಮೂರ್ತಿಗಳಿದ್ದು ಮೂಲತಃ ಶೈವ ದೇವಾಲಯವಾದರೂ ಭಿತ್ತಿಯಲ್ಲಿ ಕೆಲವೇ ಕೆಲವು ಶೈವಮೂರ್ತಿ ಹೊರತುಪಡಿಸಿದರೆ ಉಳಿದವೆಲ್ಲ ವೈಷ್ಣವ ಮೂರ್ತಿಗಳಿರುವುದು ದೇವಾಲಯದ ವಿಶೇಷವಾಗಿದೆ. ಎಲ್ಲಾ ಶಿಲ್ಪಗಳು ಭಗ್ನವಾಗಿರುವುದನ್ನು ಕಾಣಬಹುದು. ಮುಖ್ಯವಾಗಿ ಲಕ್ಷ್ಮೀ, ವಿಷ್ಣುವಿನ ಶಿಲ್ಪ, ಸಪ್ತಮಾತೃಕೆಯರ ಶಿಲ್ಪ, ಪಾರ್ವತಿ, ಶಿವ, ಸರಸ್ವತಿ ಮೂರ್ತಿಗಳು, ಭಿತ್ತಿಯಲ್ಲಿನ ಎಲ್ಲ ಮೂರ್ತಿಗಳ ಪೀಠದಲ್ಲಿ ಶಿಲ್ಪಗಳ ಹೆಸರು

ಹಾಗೂ ಶಿಲ್ಪಿಗಳ ಹೆಸರುಗಳನ್ನು ಕೆತ್ತಲಾಗಿದೆ. ಪ್ರತಿಯೊಂದು ಶಿಲ್ಪದ ಎಡಬದಿಯಲ್ಲಿ ಪರಿಚಾರಕರು ಸಾಮಾನ್ಯವಾಗಿ ಕಂಡುಬರುತ್ತಾರೆ. ಲಕ್ಷ್ಮೀನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಚಾಮರಧಾರಿಣಿಯೊಂದಿಗೆ ಪ್ರದ್ಯುಮ್ನ ಮತ್ತು ಅನಿರುದ್ಧ, ನರಸಿಂಹ, ಜನಾರ್ಧನ, ಉಪೇಂದ್ರ, ಗರುಡನೊಂದಿಗೆ ನಿಂತಿರುವ ಕೃಷ್ಣ, ಚತುರ್ಭುಜವಾದ ಶಿವನು ಎರಡು ಕೈಗಳಲ್ಲಿ ಹಾವು ಮತ್ತು ತ್ರಿಶೂಲವನ್ನು ಹೊಂದಿದ್ದು, ಮತ್ತೆರಡು ಕೈಗಳು ಮುರಿದಿವೆ.[೨]

ಶಿಖರವು ದ್ರಾವಿಡ ಶೈಲಿಯಲ್ಲಿದೆ. ಇದು ಉಪಾನದಿಂದ ಶಿಖರದವರೆಗೆ ದೇವಾಲಯದ ಸೌಂದರ್ಯವನ್ನು ಹೆಚ್ಚಿಸಿದೆ. ಈ ಶಿಖರವು ಹದಿನಾರು ಕೋನಗಳಿಂದ ಕೂಡಿ ನಕ್ಷತ್ರಾಕಾರವಾಗಿದೆ. ಕಪೋತದ ಮೇಲೆ ಚಿಕ್ಕ ಚಿಕ್ಕ ಗೋಪುರ ಸೇರಿಸಿದಂತೆ ಕಾಣುತ್ತದೆ. ಮೇಲೆ ಹೋದಂತೆ ಚಿಕ್ಕದಾಗಿದ್ದು ಇದರ ಮೇಲೆ ಸ್ತೂಪಿ ಇದ್ದು ನಂತರ ಕಳಸವಿದೆ. ಪೂರ್ವಕ್ಕೆ ಸಳನ ಶಿಲ್ಪದ ಜಾಗದಲ್ಲಿ ನಂತರದ ಕಾಲದಲ್ಲಿ ಗಾರೆಯಿಂದ ನಿರ್ಮಿತವಾದ ನಂದಿಯ ವಿಗ್ರಹವನ್ನು ಇಡಲಾಗಿದೆ.

### ೪.೧.೨ ಕೆಂಗಲ್ ಸಿದ್ದೇಶ್ವರ ದೇವಾಲಯ

ಈ ದೇವಾಲಯವು ನಗರದಿಂದ ಪೂರ್ವ ದಿಕ್ಕಿಗೆ ಸುಮಾರು ೧ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೧೮೧ರ ಶಾಸನದಲ್ಲಿ ಎರಡನೇ ಬಲ್ಲಾಳನ ಕಾಲದಲ್ಲಿ ನಿರ್ಮಾಣವಾಗಿರುವುದು ಉಲ್ಲೇಖವಾಗಿದೆ. ಈ ದೇವಾಲಯವು ಶಿಥಿಲವಾಗಿದ್ದರಿಂದ ನಂತರದ ಕಾಲದಲ್ಲಿ ಪುನರ್ ನಿರ್ಮಾಣಗೊಂಡಿದೆ. ಇನ್ನೊಂದು ಶಾಸನದಲ್ಲಿ ರಾಜಧಾನಿ ಅರಸೀಕೆರೆ ಎಂಬ ಉಲ್ಲೇಖವಿದೆ. ಹಾಗೆ ಬಲ್ಲಾಳೇಶ್ವರ ದೇವಾಲಯಕ್ಕೆ ದಾನಕೊಟ್ಟ ಬಗ್ಗೆ ತಿಳಿಯಬಹುದು. ಅದೇ ದೇವಾಲಯದ ಬಳಿ ಇರುವ ಇನ್ನೊಂದು ಶಾಸನವು ೧೨–೧೩ನೇ ಶತಮಾನದ್ದಾಗಿದೆ.

ದೇವಾಲಯವು ಪೂರ್ವಾಭಿಮುಖವಾಗಿದ್ದು ಗರ್ಭಗುಡಿಯಲ್ಲಿ ಪಾಣಿಪೀಠದ ಮೇಲೆ ಶಿವಲಿಂಗವಿದೆ. ಅದು ಸುಮಾರು ಮೂರು ಅಡಿ ಎತ್ತರವಾಗಿದೆ. ಗರ್ಭಗುಡಿಯ ಬಾಗಿಲುವಾಡವು ಹೂಬಳ್ಳಿಯಿಂದ ಅಲಂಕೃತಗೊಂಡಿದ್ದು ಎರಡು ಬದಿ ದ್ವಾರಪಾಲಕರಿದ್ದಾರೆ. ಅಂತರಾಳದಲ್ಲಿ ಸುಂದರವಾದ ನಂದಿವಿಗ್ರಹವಿದೆ. ನವರಂಗವು ನಾಲ್ಕು ಚೌಕಾಕಾರದ ಕಂಬಗಳನ್ನು ಹೊಂದಿದ್ದು, ಮುಂದೆ ಮುಖಮಂಟಪವನ್ನು ಹೊಂದಿದೆ. ಸರಳಶೈಲಿಯ ಅಧಿಷ್ಠಾನವಿದೆ ಭಿತ್ತಿಯು ಕಲ್ಲುಗಾರೆಯಿಂದ ನಿರ್ಮಾಣವಾಗಿದ್ದು ಗೋಡೆಗೆ ಸುಣ್ಣವನ್ನು ಬಳಿಯಲಾಗಿದೆ. ಪ್ರಸ್ತರವು ಮುಂಚಾಚಿದ್ದು ಮೇಲ್ಛಾವಣಿಯಲ್ಲಿ ಒಂದು ದೇವಕೋಷ್ಠವಿದ್ದು ಅದರ ಒಳಗೆ ಶಿವನ ಮೂರ್ತಿ ಇದೆ. ಈ ದೇವಾಲಯವು ಚಿಕ್ಕದಾದ ಶಿಖರವನ್ನು ಹೊಂದಿದೆ.

### ೪.೧.೩ ಭವಾನಿ ಶಂಕರ ದೇವಾಲಯ

ವಿಜಯನಗರೋತ್ತರ ಕಾಲದ ದೇವಾಲಯವಾಗಿದ್ದು ಇದು ನಗರದ ಮಧ್ಯಭಾಗದಲ್ಲಿದೆ. ಪೂರ್ವಾಭಿಮುಖವಾಗಿದ್ದು ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪವನ್ನು ಕಾಣಬಹುದು. ಸುತ್ತಲೂ ಪ್ರಾಕಾರ ಗೋಡೆಯನ್ನೊಳಗೊಂಡ ಪ್ರವೇಶ ದ್ವಾರವು ೬ ಕಂಬಗಳನ್ನೊಳಗೊಂಡಿದೆ. ಮುಖ್ಯವಾಗಿ ಗರ್ಭಗೃಹದ ಬಾಗಿಲವಾಡವು ಸರಳವಾಗಿದ್ದು ಕೆಳಗೆ ದ್ವಾರಪಾಲಕರಿದ್ದಾರೆ. ಅವರ ಕೈಯಲ್ಲಿ ಡಮರು, ಖಡ್ಗ, ತ್ರಿಶೂಲವಿದೆ. ಲಲಾಟ ಬಿಂಬದಲ್ಲಿ ನಟರಾಜನ ಮೂರ್ತಿಶಿಲ್ಪದ ಇಕ್ಕೆಲಗಳಲ್ಲಿ ನರ್ತಕಿಯರ ಶಿಲ್ಪವಿದೆ. ಅಂತರಾಳವು ಚಿಕ್ಕದಾಗಿದ್ದು ನವರಂಗವನ್ನೊಳಗೊಂಡಂತೆ ಬಲಭಾಗದ ಚಿಕ್ಕ ಗರ್ಭಗುಡಿಯಲ್ಲಿ ಲಕ್ಷ್ಮೀನಾರಾಯಣನ ಮೂರ್ತಿ ಇದೆ. ಎಡಗಡೆಯಲ್ಲಿ ಭವಾನಿ, ಪಾರ್ವತಿ ದೇವಿಯ ಮೂರ್ತಿ ಇದೆ. ನವರಂಗದ ನಾಲ್ಕು ಕಂಬಗಳ ಮಧ್ಯದಲ್ಲಿ ನಂದಿಯ ವಿಗ್ರಹವು ಬಹಳ ಸುಂದರವಾಗಿದೆ. ಕಂಬಗಳ ರಚನೆಯು ಕೆಳಗಡೆ ಚಚ್ಚೌಕಾರವಾಗಿದ್ದು, ಮಧ್ಯದಲ್ಲಿ ದುಂಡಾಗಿದ್ದು ಘಟ, ಫಲಕ ನಂತರ ಬೋದಿಗೆಯಿಂದ ಕೂಡಿದೆ. ಮುಖಮಂಟಪದಲ್ಲಿ ಎಂಟು ಕಂಬಗಳಿವೆ. ಅವು ಕೆಳಗೆ ಚೌಕಾಕಾರ ಮೇಲೆ ಐದು ಕೋನಗಳು ಒಳಗೊಂಡಿರುತ್ತವೆ. ಬೋದಿಗೆಯಲ್ಲಿ ಪದ್ಮವಿದೆ. ಮುಖಮಂಟಪದಿಂದ ನವರಂಗಕ್ಕೆ ಹೋಗಲು ಮೂರು ಸೋಪಾನಗಳಿವೆ. ಸರಳ ಶೈಲಿಯ ಅಧಿಷ್ಠಾನ ಭಿತ್ತಿಯಲ್ಲಿ ಅರೆಗಂಬಗಳಿರುತ್ತವೆ. ಪ್ರಸ್ತರವೂ ಸರಳವಾಗಿದ್ದು ಮೇಲ್ಛಾವಣಿಯಲ್ಲಿ ಮೂರು ದೇವಕೋಷ್ಠಕಗಳಿವೆ. ಒಂದರಲ್ಲಿ ಮಾತ್ರ ನಂದಿಯ ಮೇಲೆ ಕುಳಿತಿರುವ ಶಿವನ ಮೂರ್ತಿ ಇದೆ. ಚಿಕ್ಕದಾದ ಶಿಖರವಿದೆ. ದೇವಾಲಯದ ಮುಂದೆ ದೀಪಸ್ತಂಭವಿದೆ. ವಿಶೇಷವೆಂದರೆ ಗರ್ಭಗುಡಿಯ ಹಿಂದೆ ಪಶ್ಚಿಮಾಭಿಮುಖವಾಗಿ ಗರ್ಭಗುಡಿಗೆ ಹೊಂದಿಕೊಂಡಂತೆ ನಾಲ್ಕು ಕಂಬಗಳಿಂದ ಕೂಡಿದ ಚಿಕ್ಕಗುಡಿಯಲ್ಲಿ ಆದಿಶಕ್ತಿ ಭವಾನಿಯ ವಿಗ್ರಹವಿದ್ದು ಬಲಗಡೆ ಗಣೇಶನ ಮೂರ್ತಿಶಿಲ್ಪವಿದೆ.

### ೪.೧.೪ ಮಲ್ಲೇಶ್ವರ ದೇವಾಲಯ

ಇದು ವಿಜಯನಗರ ಕಾಲದ ದೇವಾಲಯವಾಗಿದ್ದು, ಕ್ರಿ.ಶ. ೧೩೬೮ರ ಶಾಸನವು ವೀರ ಬಲ್ಲಾಳಪುರ ಎಂಬ ಉಲ್ಲೇಖವನ್ನು ಒಳಗೊಂಡಿದೆ ಮತ್ತು ಮಲೆಮಲ್ಲೇಶ್ವರ ಎಂಬ ಹೆಸರು ಉಲ್ಲೇಖವಿದೆ.[೩] ಈ ದೇವಾಲಯವು ನಗರದಿಂದ ದಕ್ಷಿಣ ದಿಕ್ಕಿಗೆ ಒಂದು ಕಿ.ಮೀ. ದೂರದಲ್ಲಿದೆ. ಸುಮಾರು ೧೫೦ ಮೆಟ್ಟಿಲುಗಳನ್ನೇರಿ ಹೋಗಬೇಕು. ಬೆಟ್ಟದ ಮೇಲಿರುವ ಈ ದೇವಾಲಯದ ತಳವಿನ್ಯಾಸವು ಗರ್ಭಗುಡಿ, ಅಂತರಾಳ, ನವರಂಗ, ಮುಖಮಂಟಪವು ಇದೆ. ಹಳೆಯ ದೇವಾಲಯವು ನಶಿಸಿ ಹೋಗಿದ್ದರಿಂದ ಜೀರ್ಣೋದ್ಧಾರಗೊಂಡಿದೆ. ಗರ್ಭಗುಡಿಯಲ್ಲಿ ನೆಲದಲ್ಲಿ ಉದ್ಭವವಾದ ಶಿವಲಿಂಗವಿದೆ. ಬಾಗಿಲುವಾಡವು ಸರಳವಾಗಿದೆ. ಅಂತರಾಳವು ಚಿಕ್ಕದಾಗಿದ್ದು ನವರಂಗದಲ್ಲಿರುವ ನಂದಿಯ ಮುಖವು ಬಲಗಡೆಗೆ ತಿರುಗಿರುವುದು ವಿಶೇಷವಾಗಿದೆ. ನವರಂಗದ ಕಂಬಗಳನ್ನು ತಿರುಗುಣಿ

ಯಂತ್ರದಿಂದ ಮಾಡಲಾಗಿದೆ. ಕೆಳಗೆ ಪೀಠವು ಚೌಕಾಕಾರವಾಗಿದ್ದು ಮಧ್ಯಭಾಗದಲ್ಲಿ ವೃತ್ತಾಕಾರವಾಗಿದೆ,. ಘಟ, ಫಲಕಗಳಿವೆ. ಬೋದಿಗೆಯು ಪುಷ್ಪಲಂಕೃತವಾಗಿದೆ. ಭುವನೇಶ್ವರಿಯು ಸರಳವಾಗಿದ್ದು. ನವರಂಗದಲ್ಲಿ ಬಲಗಡೆ ವೀರಭದ್ರನ ಮೂರ್ತಿ ಶಿಲ್ಪವಿದೆ. ಇದಕ್ಕೆ ನಾಲ್ಕು ಕೈಗಳಿದ್ದು ತ್ರಿಶೂಲ, ಡಮರು, ಖಡ್ಗ, ಖೇಟ ಹಿಡಿದಿರುವನು. ಕಿರೀಟ ಮುಕುಟವಾಗಿದ್ದು ಕರ್ಣಕುಂಡಲ, ಭುಜವಲ್ಕ, ಕಾಲಿಗೆ ದಪ್ಪನೆಯ ಕಡಗ ಧರಿಸಿರುವನು. ಕೈಗಳಲ್ಲಿಯೂ ಕಡಗಗಳಿವೆ ಮತ್ತು ಕಂಠಹಾರವೂ ಇದೆ. ಕಪ್ಪು ಶಿಲೆಯಿಂದ ಮಾಡಲಾಗಿದೆ.

ಮುಖಮಂಟಪವು ೬ ಕಂಬಗಳನ್ನು ಒಳಗೊಂಡಿದೆ. ಇದರಲ್ಲಿ ವಿಶೇಷವೆಂದರೆ ಮಂಟಪದ ಚಿಕ್ಕ ಗುಡಿಯಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಗಣೇಶನ ಮೂರ್ತಿಶಿಲ್ಪವು ವಿಶಿಷ್ಟವಾಗಿದ್ದು ಎಡಗಡೆ ಗರುಡ ರೂಪ ಬಲಗಡೆಗೆ ಆಂಜನೇಯ ರೂಪ, ಮಧ್ಯದಲ್ಲಿ ಗಣೇಶನ ಮುಖವನ್ನು ಕಾಣಬಹುದು. ಚತುರ್ಭುಜಗಳನ್ನು ಹೊಂದಿರುವ ಮೂರ್ತಿಯ ತಲೆಯ ಮೇಲೆ ಆದಿಶೇಷನ ಏಳು ಹೆಡೆಗಳಿವೆ. ಹೊರಭಾಗದಲ್ಲಿ ಭಿತ್ತಿಯು ಸರಳವಾಗಿದ್ದು ಅದಕ್ಕೆ ಸುಣ್ಣವನ್ನು ಬಳಿದಿದ್ದಾರೆ. ಶಿಖರವು ದ್ರಾವಿಡ ಶೈಲಿಯಲ್ಲಿದ್ದು ಅದರಲ್ಲಿ ಶಿವ, ಬ್ರಹ್ಮ, ಗಣೇಶನ ಮೂರ್ತಿಗಳನ್ನು ಕಾಣಬಹುದು. ಸ್ತೂಪಿಯ ಮೇಲೆ ಮೂರು ಕಳಶಗಳಿವೆ. ಗರ್ಭಗುಡಿಯ ಹಿಂದೆ ದೀಪಸ್ತಂಭವು ಪಶ್ಚಿಮಾಭಿಮುಖವಾಗಿದ್ದು ಪ್ರತೀ ಕಾರ್ತಿಕ ಮಾಸದಲ್ಲಿ ದೀಪವನ್ನು ಹಚ್ಚುವ ಪದ್ಧತಿ ಇದೆ.

### ೪.೧.೫ ಜೇನುಕಲ್ ಸಿದ್ದೇಶ್ವರ ದೇವಾಲಯ

ಅರಸೀಕೆರೆಯಿಂದ ಆರು ಕಿ.ಮೀ. ದೂರದಲ್ಲಿರುವ ಯಾದಾಪುರ ಗ್ರಾಮದ ಜೇನುಕಲ್ ಸಿದ್ದೇಶ್ವರ ಬೆಟ್ಟವು ಪ್ರಸಿದ್ಧಿ ಪಡೆದು ಪುಣ್ಯಕ್ಷೇತ್ರವಾಗಿದೆ. ಈ ಬೆಟ್ಟವು ಸುಮಾರು ೩೫೦ ಮೆಟ್ಟಿಲುಗಳನ್ನು ಹೊಂದಿದ್ದು ಶ್ರೀ ಸಿದ್ದಪ್ಪ ಅವಧೂತರು ಬೆಟ್ಟದ ಮೇಲೆ ತಮ್ಮ ಎರಡು ಪಾದಗಳನ್ನು ಮಾತ್ರ ಮೂಡಿಸಿ. ಬೆಟ್ಟದ ಕೆಳಗೆ ಯಾದಾಪುರ ಊರ ಮಧ್ಯೆ ಮಲಗಿರುವ ಮುದ್ದು ನಂದಿಯ ರೂಪದಲ್ಲಿ ಉದ್ಭವಿಸಿದ್ದಾರೆ ಎಂದೂ, ಹಿಂದೆ ಈ ಪ್ರಾಂತ್ಯ ಗೊಂಡಾರಣ್ಯವಾಗಿದ್ದು, ಸಿದ್ದಪ್ಪ ತಪಸ್ಸು ಮಾಡಿದ ಪ್ರತೀತಿ ಇದೆ.[೪] ಬೆಟ್ಟದಲ್ಲಿ ಶ್ರೀಯವರ ಸನ್ನಿದಾನದ ಪಕ್ಕದಲ್ಲಿರುವ ದೊಡ್ಡ ದೊಡ್ಡ ಬಂಡೆಗಳಲ್ಲಿ ಜೇನುಗೂಡು ಸದಾಕಾಲ ಕಟ್ಟಿರುವುದರಿಂದ ಈ ಕ್ಷೇತ್ರಕ್ಕೆ ಜೇನುಕಲ್ ಸಿದ್ದೇಶ್ವರಸ್ವಾಮಿ ಕ್ಷೇತ್ರವೆಂದು ಹೆಸರು ಪ್ರಚಲಿತವಿದೆ. ಈ ಕ್ಷೇತ್ರಕ್ಕೆ ಬರುವ ಭಕ್ತರು ಅಪವಿತ್ರವಾಗಿ ಬಂದರೆ ಜೇನುಹುಳುಗಳು ಎದ್ದು ತೊಂದರೆ ಮಾಡುತ್ತವೆ ಎಂಬ ನಂಬಿಕೆ ಭಕ್ತರದು. ಮೂರು ಹುಣ್ಣಿಮೆಗೆ ಈ ಕ್ಷೇತ್ರಕ್ಕೆ ಬಂದು ಹರಕೆ ಮಾಡಿಕೊಂಡು ಹೋದರೆ ಅವರ ಇಷ್ಟಾರ್ಥಗಳು ಸಿದ್ಧಿಯಾಗುತ್ತವೆ ಎಂಬ ನಂಬಿಕೆಯಿದೆ. ಪ್ರತೀ ಹುಣ್ಣಿಮೆ ಹಾಗೂ ಚೈತ್ರಮಾಸದಲ್ಲಿ ನಡೆಯುವ ಜಾತ್ರೆಗೆ ಭಕ್ತ ಸಮೂಹವೇ ಸೇರುತ್ತದೆ.

ಮತ್ತೊಂದು ವಿಶೇಷವೆಂದರೆ ಬೆಟ್ಟದ ಮೇಲೆ ಒಂದು ಕಲ್ಯಾಣಿ ರೀತಿಯ ಕೊಳವಿದೆ. ಅದಕ್ಕೆ ಮಕ್ಕಳಾಗದವರು, ಮದುವೆಯಾಗದ ಹೆಣ್ಣುಮಕ್ಕಳು ಗಂಗಮ್ಮ ಪೂಜೆ ಮಾಡಿದರೆ ಮಕ್ಕಳಭಾಗ್ಯ, ಕಂಕಣ ಭಾಗ್ಯ ಬರುವುದು ಎಂಬ ನಂಬಿಕೆಯಿದೆ. ಈ ಬಾವಿಯಲ್ಲಿ ಸದಾಕಾಲ ವರ್ಷಪೂರ್ತಿ ನೀರು ಇರುತ್ತದೆ. ಇತ್ತೀಚಿನ ದಿನಗಳಲ್ಲಿ ಶ್ರೀಯವರ ಪಾದಗಳಿರುವ ಸ್ಥಳಕ್ಕೆ ಅಮೃತಶಿಲೆಯಿಂದ ಮಂಟಪವನ್ನು ಕಟ್ಟಲಾಗಿದೆ.

### ೪.೧.೬ ಮಲ್ಲಿಕಾರ್ಜುನ ದೇವಾಲಯ

ನಗರದಿಂದ ಆರು ಕಿ.ಮೀ. ದೂರದ ಚಲ್ಲಾಪುರ ಗ್ರಾಮದಲ್ಲಿ ಶ್ರೀ ಮಲ್ಲಿಕಾರ್ಜುನ ದೇವಾಲಯವಿದೆ. ಇದು ಸುಮಾರು ೩೦೦ ವರ್ಷಗಳ ಹಳೆಯದಾಗಿದ್ದು. ಈ ಗ್ರಾಮದ ಪಟೇಲರು ಅಥವಾ ಮುಖ್ಯಸ್ಥರಾದ ಪರ್ವತಜ್ಜ ಎಂಬುವವರು ಮಲ್ಲಿಕಾರ್ಜುನ ವಿಗ್ರಹವನ್ನು ಶ್ರೀಶೈಲದಿಂದ ತಂದು ಸ್ಥಾಪಿಸಿದ್ದಾರೆ ಎಂದು ಹೇಳುತ್ತಾರೆ. ಈ ದೇವಾಲಯವು ಉತ್ತರಾಭಿಮುಖವಾಗಿದ್ದು ಗರ್ಭಗೃಹದಲ್ಲಿ ಮಲ್ಲಿಕಾರ್ಜುನ ಸ್ವಾಮಿಯ ಕಂಚಿನ ಮೂರ್ತಿ ಇದೆ. ಅಲ್ಲೆ ಸ್ವಲ್ಪ ಮುಂದೆ ನಂದಿಯನ್ನು ಉತ್ತರಾಭಿಮುಖವಾಗಿ ಕೂರಿಸಿದ್ದಾರೆ. ನವರಂಗದ ನಾಲ್ಕು ಕಂಬಗಳು ಚೌಕಾಕಾರವಾಗಿ ಆರು ಕೋನಗಳಿಂದ ಕೂಡಿವೆ. ಮುಖಮಂಟಪವು ನಾಲ್ಕು ಕಂಬಗಳನ್ನೊಳಗೊಂಡಿದೆ. ಈ ಮಂಟಪದ ಬಲಭಾಗದಲ್ಲಿ ಕರ್ವಗಲ್ಲು ಎಂಬ ಕಲ್ಲು ಇರುವುದನ್ನು ಕಾಣಬಹುದು. ಸರಳಶೈಲಿ ಅಧಿಷ್ಠಾನವು ಮೂರು ಅಡಿ ಎತ್ತರವಾಗಿದೆ. ಭಿತ್ತಿಯಲ್ಲಿರುವ ಕುಂಡ್ಯಸ್ತಂಭಗಳ ಮಧ್ಯದಲ್ಲಿ ಪುಷ್ಪಲಂಕಾರವಿದೆ. ಪ್ರಸ್ತರವು ಸ್ವಲ್ಪ ಹೊರಚಾಚಿದ್ದು. ದ್ರಾವಿಡ ಮಾದರಿಯ ಶಿಖರವಿದೆ. ಇದರ ಸುತ್ತಲೂ ಶಿವ, ಬ್ರಹ್ಮ, ಗಣೇಶ, ವಿಷ್ಣುವಿನ ಮೂರ್ತಿಗಳಿವೆ. ಸ್ತೂಪಿಯಲ್ಲಿ ಲೋಹದ ಕಳಶವಿದೆ.

ವಿಶೇಷವೆಂದರೆ ದೇವಾಲಯದ ಮುಂದೆ ನಂದಿ ಮಂಟಪವಿದೆ. ಊರಿನ ಜನರು ದೇವರ ಹೆಸರಿನಲ್ಲಿ ಒಂದು ಬಸವನನ್ನು ಬಿಟ್ಟಿದ್ದು, ಅದು ದೇವಾಲಯದ ಮುಂದೆಯೇ ತನ್ನ ಪ್ರಾಣ ಬಿಟ್ಟಿರುವುದರಿಂದ ಅಲ್ಲಿಯೇ ಸಮಾಧಿ ಮಾಡಿ, ಆ ಸ್ಥಳದಲ್ಲಿ ಮಂಟಪವನ್ನು ನಿರ್ಮಿಸಿ ನಂದಿಯನ್ನು ಇಟ್ಟಿದ್ದಾರೆ.

ಇದೇ ಗ್ರಾಮದಲ್ಲಿ ಮತ್ತೊಂದು ಚೋಳರ ಕಾಲದ ಸೋಮೇಶ್ವರ ದೇವಾಲಯವು ಸಂಪೂರ್ಣವಾಗಿ ನಾಶವಾಗಿದ್ದು, ಅದು ಜೀರ್ಣೋದ್ದಾರಗೊಳ್ಳುತ್ತಿದೆ. ಯಾವುದೇ ರೀತಿಯ ಕುರುಹುಗಳು ಕಂಡುಬರುತ್ತಿಲ್ಲ.

### ೪.೧.೭ ಶಂಭುಲಿಂಗೇಶ್ವರ ದೇವಾಲಯ

ಗಂಡಸಿ ಊರಿನಿಂದ ಹೊರಗೆ ಕೆರೆಯ ಏರಿಯ ಪಕ್ಕದಲ್ಲಿ ಶಂಭುಲಿಂಗೇಶ್ವರ ದೇವಾಲಯವಿದೆ. ಈ ದೇವಾಲಯದ ಜಿನಶಾಸನವು ಜೈನ ಪರಂಪರೆಯಲ್ಲಿ ಪ್ರಸಿದ್ಧವಾದ ಜಿನ ಸೇನಾಚಾರ್ಯ ಮತ್ತು ಅವರ ಶಿಷ್ಯ ಗುಣಭದ್ರಾಚಾರ್ಯರನ್ನು ಹೆಸರಿಸಿದೆ.[೫] ಪೂರ್ವಾಭಿಮುಖವಾಗಿದ್ದು ಗರ್ಭಗೃಹದಲ್ಲಿ ಪಾಣಿಪೀಠದ ಮೇಲೆ ಶಿವಲಿಂಗವು ಸುಮಾರು ಮೂರು ಅಡಿ ಎತ್ತರವಾಗಿದೆ. ಸುಖನಾಸಿಯೂ ಇದೆ. ನವರಂಗದಲ್ಲಿ ನಾಲ್ಕು ಕಂಬಗಳ ಮಧ್ಯೆ ಜೋಡಿ ನಂದಿ ವಿಗ್ರಹಗಳಿವೆ. ಒಂದು ದೊಡ್ಡದು ಮತ್ತೊಂದು ಸಣ್ಣದು ನವರಂಗದಲ್ಲಿಯೇ ದಕ್ಷಿಣ ದಿಕ್ಕಿಗೆ ಒಂದು ದ್ವಾರವಿದೆ. ಅಧಿಷ್ಠಾನವು ಮುಚ್ಚಿಹೋಗಿದೆ. ಭಿತ್ತಿಯು ಕಲ್ಲು ಮತ್ತು ಗಾರೆಯಿಂದ ನಿರ್ಮಾಣವಾಗಿದ್ದು ಬಣ್ಣವನ್ನು ಬಳಿದಿದ್ದಾರೆ. ಪ್ರಸ್ತರವು ಸರಳವಾಗಿದೆ. ಚಿಕ್ಕದಾದ ಆಧುನಿಕ ಶಿಖರವಿದ್ದು, ಸ್ತೂಪಿಯಲ್ಲಿ ಕಳಶವಿದೆ.

ಗರ್ಭಗೃಹದ ಹಿಂದೆ ಪ್ರತ್ಯೇಕವಾದ ಭೈರವನ ಚಿಕ್ಕಗುಡಿ ಇದೆ. ಜಟಾಮುಕುಟಧಾರಿಯಾದ ಭೈರವನು ತನ್ನ ನಾಲ್ಕು ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಮನುಷ್ಯನ ರುಂಡವನ್ನು ಹಿಡಿದಿರುವನು. ಅದರಿಂದ ಕೆಳಗೆ ಬೀಳುತ್ತಿರುವ ರಕ್ತವನ್ನು ನಾಯಿಯು ನೆಕ್ಕುತ್ತಿದೆ. ಭುಜವಲ್ಯ, ಕಂಠಿಹಾರ, ಕಾಲುಗಳಿಗೆ ದಪ್ಪನೆಯ ಕಡಗವನ್ನು ಧರಿಸಿರುವನು. ಈ ದೇವಾಲಯದ ಒಳಗಿರುವ ಶಾಸನವು ಹೊಯ್ಸಳ ನರಸಿಂಹನ ಕಾಲದಲ್ಲಿ (ಕ್ರಿ.ಶ. ೧೧೫೨-೫೮ರಲ್ಲಿ) ನಿರ್ಮಾಣವಾಗಿದೆ.

### ೪.೧.೮ ಶಂಕರೇಶ್ವರ ದೇವಾಲಯ

ಈ ದೇವಾಲಯವು ಹೊಯ್ಸಳ ಕಾಲದ್ದಾಗಿದ್ದು, ತಳಲೂರು ಕ್ರಿ.ಶ. ೧೧೮೫ರ ಶಾಸನದಲ್ಲಿ ಮೊದಲು ತಳಿಲೂರು ಎಂಬ ಉಲ್ಲೇಖವಿದೆ.[೬] ಈಗ ಈ ದೇವಾಯವು ಜೀರ್ಣೋದ್ಧಾರಗೊಂಡಿದೆ. ದೇವಾಲಯವು ಪೂರ್ವಾಭಿಮುಖವಾಗಿದ್ದು ತಳವಿನ್ಯಾಸ ಗರ್ಭಗುಡಿ, ಅಂತರಾಳ, ನವರಂಗವಿದೆ. ಗರ್ಭಗೃಹದಲ್ಲಿ ಶಿವಲಿಂಗವು ಮೂರು ಅಡಿ ಎತ್ತರವಿದೆ. ನವರಂಗದಲ್ಲಿ ನಂದಿಯ ವಿಗ್ರಹವು ಸುಂದರ ಹಾಗೂ ಸರಳವಾದ ಕಂಬಗಳಿವೆ.ನವರಂಗವನ್ನು ಪ್ರವೇಶಿಸಲು ಮೂರು ಸೋಪಾನಗಳಿವೆ. ಹೊರಭಾಗದ ಅಧಿಷ್ಠಾನವು ಮೂರು ಅಡಿ ಎತ್ತರವಾಗಿದೆ. ಭಿತ್ತಿಯು ಬೆಣಚುಗಳಿಂದ ನಿರ್ಮಾಣವಾಗಿದೆ. ಆಧುನಿಕ ಮಾದರಿಯ ಶಿಖರ ಸ್ತೂಪಿಯಲ್ಲಿ ಕಳಶವಿದೆ. ದೇವಾಲಯದ ಮುಂದೆ ಶಾಸನವಿದ್ದು ಊರ ಹೆಬ್ಬಾಗಿಲಲ್ಲಿ ಗಣೇಶನ ಮೂರ್ತಿಶಿಲ್ಪವು ವಿಶೇಷವಾಗಿದೆ.

### ೪.೧.೯ ಭೋಗೇಶ್ವರ ದೇವಾಲಯ

ಮತ್ತೊಂದು ಗ್ರಾಮವಾದ ಚಿಕ್ಕೂರಿನಲ್ಲಿ ಭೋಗೇಶ್ವರ ದೇವಾಲಯವಿದೆ. ಗರ್ಭಗೃಹದಲ್ಲಿ ಪಾಣಿಪೀಠದ ಮೇಲೆ ಶಿವಲಿಂಗವು ಸುಮಾರು ಮೂರು ಅಡಿ ಎತ್ತರವಾಗಿದೆ. ಅಂತರಾಳದ ನಾಲ್ಕು ಕಂಬಗಳ ಮಧ್ಯದಲ್ಲಿ ನಂದಿಯ ವಿಗ್ರಹವಿದೆ. ಅಂತರಾಳದಲ್ಲಿಯೇ ಗಣೇಶ ಮತ್ತು ವೀರಭದ್ರನ ಮೂರ್ತಿಶಿಲ್ಪಗಳಿವೆ. ನವರಂಗದ ನಾಲ್ಕು ಕಂಬಗಳು ಕೆಳಗೆ ಚೌಕಾಕಾರವಾಗಿದ್ದು, ಮಧ್ಯದಲ್ಲಿ ಗಂಟೆಯಾಕಾರವಾಗಿ ಬೋದಿಗೆಯಿಂದ ಕೂಡಿದೆ. ಭಿತ್ತಿಯು ಸರಳವಾಗಿದ್ದು ನಕ್ಷತ್ರಾಕಾರದ ಜಾಲಂದ್ರವಿದೆ. ಪ್ರಸ್ತರವು ಸ್ವಲ್ಪ ಹೊರಚಾಚಿದೆ. ಶಿಖರವು ದ್ರಾವಿಡ ಶೈಲಿಯಲ್ಲಿದೆ. ಕಂಚಿನ ಕಳಶವಿದೆ. ಶ್ರೀ ಧರ್ಮಸ್ಥಳದ ಟ್ರಸ್ಟ್ ಸಮಿತಿಯು ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದೆ.

### ೪.೧.೧೦ ಸಿದ್ದೇಶ್ವರ ಅಥವಾ ಬಸವೇಶ್ವರ ದೇವಾಲಯ

ಹೊಯ್ಸಳರ ಕಾಲದ ದೇವಾಲಯವಿದು ಈಗ ಇದು ಶಿಥಿಲಾವಸ್ಥೆಯಲ್ಲಿದೆ. ಹಿರಿಯೂರು ಗ್ರಾಮದಿಂದ ಹೊರಗೆ ಕೆರೆಯ ದಡದಲ್ಲಿ ಇದೆ. ತ್ರಿಕೂಟ ದೇವಾಲಯವಾಗಿದ್ದು, ಪಶ್ಚಿಮಾಭಿಮುಖವಾಗಿದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಸುಖನಾಸಿಯಲ್ಲಿ ನಂದಿಯ ವಿಗ್ರಹವಿದೆ. ನವರಂಗದಲ್ಲಿ ಉತ್ತರ ಮತ್ತು ದಕ್ಷಿಣ ದಿಕ್ಕಿಗೆ ಎದುರುಬದುರಾಗಿ ಎರಡು ಗರ್ಭಗೃಹಗಳಿವೆ. ಅವು

ಎರಡೂ ಖಾಲಿ ಇದ್ದು. ಐದು ಭುವನೇಶ್ವರಿಗಳು ನವರಂಗದಲ್ಲಿ ಅಲಂಕೃತವಾಗಿವೆ. ಹೊರಗಡೆ ಅಧಿಷ್ಠಾನವು ಮುಚ್ಚಿ ಹೋಗಿದೆ. ಭಿತ್ತಿಯು ಕುಡ್ಯಸ್ತಂಬಗಳಿಂದ ಕೂಡಿದೆ. ಶಿಖರವು ಕದಂಬ ನಾಗರ ಶೈಲಿ ಅಥವಾ ಫಾಂಸ್ನಾನ ಮಾದರಿಯಲ್ಲಿದೆ. ಹಿರಿಯೂರಿನ ಶಾಸನದಲ್ಲಿ ಸಿದ್ಧನಾಥ ದೇವರ ಭೂಮಿಯ ಮತ್ತು ಕೆರೆಯ ಉಲ್ಲೇಖವಿದೆ.

**೪.೧.೧೧ ಕುಂಬಳೇಶ್ವರ ದೇವಾಲಯ**

ಹಿರಿಯೂರಿನ ಮತ್ತೊಂದು ಹೊಯ್ಸಳರ ಕಾಲದ ಕುಂಜೇಶ್ವರ ಅಥವಾ ಕುಂಬಳೇಶ್ವರ ದೇವಾಲಯವನ್ನು ಕಾಣಬಹುದು. ಹಿರಿಯೂರು ಕ್ರಿ.ಶ. ೧೧೦೦ರ ಶಾಸನದಲ್ಲಿ ಮುತ್ತನ ಹೊಸ ಊರು (ಹಿರಿಯೂರು) ಎಂಬ ಉಲ್ಲೇಖವಿದೆ.[೭] ಎರೆಯಂಗನ ರಾಣಿ ಮಹಾದೇವಿಯು ಮುತ್ತನ ಹೊಸ ಊರಿನಲ್ಲಿ ಒಂದು ಕೆರೆಯನ್ನು ಕಟ್ಟಿಸುತ್ತಾಳೆ. ರಾಜಧಾನಿ ಅರಸೀಕೆರೆ, ಬಾಣಾವರ, ಅರಕೆರೆ, ಬೆಂಡೆಕೆರೆಗಳಿವೆ ಸಂಪರ್ಕ ದಾರಿಗಳು ಇದ್ದುದರ ಬಗೆಗೆ ಇಲ್ಲಿನ ಶಾಸನಗಳು ಹೇಳುತ್ತವೆ. ಕ್ರಿ.ಶ. ೧೧೩೪ರ ಮತ್ತೊಂದು ಶಾಸನದಲ್ಲಿ ಮುತ್ತನ ಹೊಸ ಊರಿನ ಕುಂಜೇಶ್ವರ ದೇವಾಲಯವು ಅಪಾರ ಭೂಮಿಯನ್ನು ಹೊಂದಿದ್ದು, ಅದನ್ನು ಆಶ್ರಯಿಸಿದ ದೊಡ್ಡ ಪರಿವಾರ ವರ್ಗವೇ ಇತ್ತು ಮತ್ತು ಅವರುಗಳಿಗೆ ಮನೆಗಳು ನಿರ್ಮಿಸಲ್ಪಟ್ಟಿದ್ದವು. ಇಲ್ಲಿ ನಡೆಯುವ ಧಾರ್ಮಿಕ ಚಟುವಟಿಕೆಗಳಿಗೆ ರಾಜಗುರುಗಳ ನೇತೃತ್ವದಲ್ಲಿ ನೂರಿಪ್ಪತ್ತು ಶೈವರ ಮುಖ್ಯ ಸ್ಥಾನಿಕರು ಹಾಜರಿರುತ್ತಿದ್ದರು.[೮] ಕಂಡನಂಬಿಯ ಮಗ ಕುಂಜೇಶ್ವರನು ಚಿಕ್ಕ ವಯಸ್ಸಿನಲ್ಲಿಯೇ ಮರಣ ಹೊಂದಿದ್ದರಿಂದ ಮಗನ ಹೆಸರಿನಲ್ಲಿ ಸುಂದರವಾದ ಕುಂಜೇಶ್ವರ ದೇವಾಲಯ ನಿರ್ಮಿಸಿದ್ದಾನೆ ಮತ್ತು ಅಪಾರ ಭೂಮಿಯನ್ನು ಈ ದೇವಾಲಯಕ್ಕೆ ದಾನ ಮಾಡಿದ್ದಾನೆ.



ದೇವಾಲಯ ಪ್ರವೇಶ ದ್ವಾರವು ದಕ್ಷಿಣ ದಿಕ್ಕಿನಲ್ಲಿದೆ. ಗರ್ಭಗೃಹವು ಪೂರ್ವಾಭಿಮುಖವಾಗಿದ್ದು, ಗರ್ಭಗೃಹದಲ್ಲಿ ಪಾಣೀಪೀಠದ ಮೇಲೆ ಶಿವಲಿಂಗವು ೩ ಅಡಿ ಎತ್ತರವಾಗಿದೆ. ಸುಖನಾಸಿಯ ಮುಂದೆ ನವರಂಗದಲ್ಲಿ ದಕ್ಷಿಣಾಭಿಮುಖವಾಗಿ ಕಿರೀಟಮುಕುಟಧಾರಿಯಾದ ಕಾರ್ತಿಕೇಯನ ಮೂರ್ತಿಶಿಲ್ಪವಿದೆ. ಈ ಶಿಲ್ಪದ ವಿಶೇಷವೆಂದರೆ ಆರು ತಲೆಗಳಿದ್ದು ಮುಂಭಾಗದಲ್ಲಿ ಮೂರು ಮುಖಗಳಿವೆ. ತನ್ನ ನಾಲ್ಕು ಕೈಗಳಲ್ಲಿ ಭರ್ಜಿ, ವಜ್ರಾಯುಧ, ಅಕ್ಷ ಮಾಲೆ, ಕಳಸ ಹಿಡಿದಿದ್ದು. ಮಯೂರನ ಮೇಲೆ ಲಲಿತಾಸನದಲ್ಲಿ ಕುಳಿತಿರುವನು. ಪಕ್ಕದಲ್ಲಿ ನಾಗಬಂಧವಿದೆ ಮತ್ತು ಪೂರ್ವಾಭಿಮುಖವಾಗಿ ಗಣೇಶನ ವಿಗ್ರಹವಿದೆ. ಪಕ್ಕದಲ್ಲಿ ಸಪ್ತಮಾತೃಕೆಯರ ಫಲಕವಿದೆ. ನವರಂಗದ ನಾಲ್ಕು ಕಂಬಗಳ ಮಧ್ಯೆ ವೇದಿಯಮೇಲೆ ಸುಂದರವಾದ ನಂದಿಯ ವಿಗ್ರಹವಿದೆ ಒಂದು ಕಂಬದಲ್ಲಿ ಜೋಡಿ ಆಂಜನೇಯನ ಉಬ್ಬುಶಿಲ್ಪವಿದೆ. ಉತ್ತರ ದಿಕ್ಕಿನ ಗೋಡೆಯಲ್ಲಿ ಮೂರು ಶಾಸನಗಳಿವೆ. ಮುಖಮಂಟಪದಲ್ಲಿ ಆರು ಕಂಬಗಳಿದ್ದು ಈ ಮಂಟಪ ಪ್ರವೇಶಿಸಲು ಐದು ಸೋಪಾನಗಳಿವೆ. ಅಧಿಷ್ಠಾನದಲ್ಲಿ ಸರಳ ಪಟ್ಟಿಕೆಗಳು ವೇದಿಯು ಇದ್ದು ಐದು ಅಡಿ ಎತ್ತರವಾಗಿದೆ. ಭಿತ್ತಿಯಲ್ಲಿ ಕುಡ್ಯಸ್ತಂಭಗಳಿದ್ದು ಪ್ರಸ್ತರವು ಸ್ವಲ್ಪ ಹೊರಚಾಚಿದೆ. ದ್ರಾವಿಡ

ಶೈಲಿಯ ಶಿಖರವಿದ್ದು ಸ್ತೂಪಿಯ ಮೇಲೆ ಕಳಶವಿದೆ. ಸುಖನಾಸಿಯ ಮೇಲೆ ಸಳನ ವಿಗ್ರಹವಿದ್ದು, ಹುಲಿಯನ್ನು ಕೊಲ್ಲುತ್ತಿರುವ ಸಳನ ಶಿಲ್ಪವು ಅದ್ಭುತವಾಗಿದೆ. ಈ ದೇವಾಲಯದ ಪಕ್ಕದಲ್ಲಿರುವ ಚಿಕ್ಕಗುಡಿಯಲ್ಲಿ ಕಾಲಭೈರವೇಶ್ವರನ ಮೂರ್ತಿ ಶಿಲ್ಪವು ಐದು ಅಡಿ ಎತ್ತರವಿದೆ. ದೇವಾಲಯದ ಮುಂದೆ ದೊಡ್ಡದಾದ ದೀಪಸ್ತಂಭವಿದೆ ಹಾಗೂ ದೊಡ್ಡದಾದ ಮಹಾದ್ವಾರವೂ ಸಹ ಇದೆ. ಇದು ಶಿಥಿಲಾವಸ್ಥೆಯಲ್ಲಿದೆ. ಈ ದೇವಾಲಯವು ಜೀರ್ಣೋದ್ಧಾರಗೊಂಡಿದೆ.

### ೪.೧.೧೨ ಬಾಣೇಶ್ವರ ದೇವಾಲಯ

ಬೆಂಗಳೂರು ಹೊನ್ನಾವರ ರಾಜ್ಯ ಹೆದ್ದಾರಿಯಲ್ಲಿ ಬರುವ ಬಾಣಾವರದಲ್ಲಿ ಬಾಣೇಶ್ವರ ದೇವಾಲಯವಿದೆ. ಬಾಣಾವರ ಕ್ರಿ.ಶ. ೧೧೮೭ರ ಶಾಸನವು ಬಾಣೇಶ್ವರ ದೇವಸ್ಥಾನದ ಬಳಿ ಇದೆ. ಈ ಶಾಸನದಲ್ಲಿ ಹೊಯ್ಸಳ ೨ನೇ ಬಲ್ಲಾಳನ ಉಲ್ಲೇಖವಿದೆ. ಮಾಚಿದೇವನೆಂಬ ಸಾತ್ವಿಕ ವಿಪ್ರನ ಮಗ ಮಾರಯ್ಯನು ಬ್ರಾಹ್ಮಣ್ಯವನ್ನು ತೊರೆದು ವಣಿಕ ಧರ್ಮವನ್ನು ಸ್ವೀಕರಿಸಿದ್ದನ್ನು ಈ ಶಾಸನ ತಿಳಿಸುತ್ತದೆ.[೯] ರಾಮ ಲಕ್ಷ್ಮಣರು ಸೀತಾನ್ವೇಷಣೆಗಾಗಿ ಇಲ್ಲಿಗೆ ಬಂದಾಗ ಲಕ್ಷ್ಮಣನು ಆಯಾಸದಿಂದ ತಾನು ಹೊತ್ತಿದ್ದ ಬಾಣದ ಬತ್ತಳಿಕೆಯನ್ನು ಬೀಳಿಸಿದ ಅದನ್ನು ರಾಮನು ಎತ್ತಿಕೊಂಡ ಸ್ಥಳವೇ ಬಾಣಾವರ ಆಯಿತೆಂದು ಸ್ಥಳಪುರಾಣವಿದೆ. ಆ ಸ್ಥಳದಲ್ಲಿಯೇ ಚೋಳರ ಶೈಲಿಯನ್ನು ಹೋಲುವ ಬಾಣೇಶ್ವರ ದೇವಾಲಯವು ಈಗ ಸಂಪೂರ್ಣವಾಗಿ ಶಿಥಿಲವಾಗಿದ್ದು ಗರ್ಭಗೃಹದಲ್ಲಿ ಶಿವಲಿಂಗವಿದೆ.

ಅದೇ ಊರಿನಲ್ಲಿ ವಿಜಯನಗರ ಕಾಲದ ಕೋಟೆಯನ್ನು ಕಾಣಬಹುದು. ಈ ಕೋಟೆಯು ಆಯತಾಕಾರವಾಗಿಯು. ಪೂರ್ವ ಪಶ್ಚಿಮವಾಗಿ ಸುಮಾರು ೨೫೦೦ ಅಡಿ ಹಾಗೂ ಉತ್ತರ ದಕ್ಷಿಣವಾಗಿ ೧೫೦೦ ಅಡಿ ವಿಸ್ತಾರವಾಗಿದೆ. ಪಶ್ಚಿಮ ಮತ್ತು ಉತ್ತರ ಭಾಗಗಳಲ್ಲಿ ಕೋಟೆಯ ಗೋಡೆಗಳು, ಬತೇರಿಗಳು, ಕಂದಕಗಳು ಕಾಣುತ್ತವೆ. ಉತ್ತರ ದಿಕ್ಕಿನ ಮಹಾದ್ವಾರ ತಕ್ಕಮಟ್ಟಿಗೆ ಸುಸ್ಥಿತಿಯಲ್ಲಿದೆ. ರಾಜ ಮತ್ತು ಪರಿವಾರದವರ ರಕ್ಷಣೆಗೋಸ್ಕರ ಈ ಉಗ್ರಾಣ ಕೋಟೆ ಕಟ್ಟಲ್ಪಟ್ಟಿದೆ.

### ೪.೧.೧೩ ರಾಮೇಶ್ವರ ದೇವಾಲಯ

ನಗರದಿಂದ ೬ ಕಿ.ಮೀ. ದೂರದ ಬೆಂಡೆಕೆರೆಯಲ್ಲಿ ರಾಮೇಶ್ವರ ದೇವಾಲಯವು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿದೆ. ಬೆಂಡೆಕೆರೆ ಕ್ರಿ.ಶ. ೧೨೩೨ರ ಶಾಸನದಲ್ಲಿ ತಂತ್ರೇಶ್ವರ ಮತ್ತು ರಾಮೇಶ್ವರ ದೇವಾಲಯಕ್ಕೆ ಭೂಮಿ ದಾನ ಮಾಡಿರುವ ಉಲ್ಲೇಖವಿದೆ. ಸಿದ್ಧನಾಥ ದೇವರ ದೀವಿಗೆಗೆ ದಾನ ನೀಡಿದ ವಿವರವಿದೆ ಹಾಗೂ ದೇವಾಲಯದ ಮಗ್ಗುಲಲ್ಲಿ ೧೬-೧೭ನೇ ಶತಮಾನದಲ್ಲಿ ಶ್ರೀ ಶೈಲದ ಶಾಖಾಮಠವೊಂದು ಇದ್ದುದಾಗಿ ತಿಳಿದುಬರುತ್ತದೆ. ಕ್ರಿ.ಶ. ೧೨೩೨ರ ಮತ್ತೊಂದು ಶಾಸನದಲ್ಲಿ ಜಯಗೊಂಡಪುರ, ಸರ್ವಜ್ಞಪುರ ಎಂಬ ಹೆಸರುಗಳ ಉಲ್ಲೇಖವಿದೆ.[೧೦]

ದೇವಾಲಯ ಪ್ರವೇಶ ದ್ವಾರವು ದಕ್ಷಿಣ ದಿಕ್ಕಿಗಿದೆ. ಗರ್ಭಗೃಹವು ಪೂರ್ವಾಭಿಮುಖವಾಗಿದ್ದು, ಬಾಗಿಲ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದ್ದು ಅದರ ಮೇಲೆ ತಾಂಡವೇಶ್ವರ ಶಿಲ್ಪವಿದೆ. ಎರಡು ಬದಿ ದ್ವಾರಪಾಲಕರು ತ್ರಿಶೂಲ, ಡಮರು, ಗದೆ ಹಿಡಿದು ನಿಂತಿದ್ದಾರೆ. ಅಂತರಾಳದ ಬಾಗಿಲಲ್ಲಿಯೂ ಸಹ ದ್ವಾರಪಾಲಕರಿದ್ದಾರೆ. ಭೈರವ ಮೂರ್ತಿಶಿಲ್ಪವಿದ್ದು ನಾಲ್ಕು ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತೊಂದು ಕೈಯಲ್ಲಿ ರುಂಡವನ್ನು ಹಿಡಿದಿದ್ದಾನೆ. ಕಾಲುಗಳ ಕೆಳಗೆ ದಕ್ಷಬ್ರಹ್ಮ ಮತ್ತೊಂದು ಕಡೆ ಶ್ವಾನದ ಶಿಲ್ಪವಿದೆ. ಕೀರ್ತಿಮುಖವು ಅಲಂಕೃತವಾಗಿ ಭೈರವನು ಜಟಾಮುಖುಟಧಾರಿಯಾಗಿ ಭುಜವಲ್ಯ, ಉದರ ಬಂದ, ಕಾಲಿಗೆ ಕಡಗ ಧರಿಸಿದ್ದಾನೆ. ನವರಂಗದಲ್ಲಿ ದಕ್ಷಿಣಾಭಿಮುಖವಾಗಿರುವ ಗರ್ಭಗೃಹದಲ್ಲಿ ಗರುಡ ಪೀಠದಮೇಲೆ ಕೇಶವನ ವಿಗ್ರಹವಿದೆ. ಶಂಖ, ಚಕ್ರ, ಗದೆ ಹಿಡಿದಿದ್ದಾನೆ. ನವರಂಗದಲ್ಲಿ ನಾಲ್ಕು ಕಂಬಗಳ ಮಧ್ಯೆ ನಂದಿ ವಿಗ್ರಹವಿದೆ. ಈ ಕಂಬಗಳನ್ನು ತಿರುಗುಣಿ ಯಂತ್ರದಿಂದ ಮಾಡಲಾಗಿದ್ದು ಉಳಿದ ಹನ್ನೆರಡು ಅರ್ಧಗಂಬಗಳು ನಕ್ಷತ್ರಾಕಾರದ ಕಂಬಗಳಾಗಿವೆ. ಇಲ್ಲಿ ಒಂಬತ್ತು ಭುವನೇಶ್ವರಿಗಳಿವೆ. ಪಶ್ಚಿಮ ಗೋಡೆಯಲ್ಲಿ ಚೌಕಾಕಾರದ ಒಂದು ಕಿಂಡಿ ಬಿಟ್ಟಿದ್ದಾರೆ. ಅದರ ಮೂಲಕ ಗರ್ಭಗೃಹದ ಶಿವಲಿಂಗಕ್ಕೆ ಸೂರ್ಯನ ಬೆಳಕು ನೇರವಾಗಿ ಬೀಳುತ್ತದೆ. ಮುಖಮಂಟಪವು ಸರಳವಾದ ೪ ಕಂಬಗಳನ್ನು ಒಳಗೊಂಡಿದೆ. ಹೊರಭಾಗದ ಅಧಿಷ್ಠಾನವು ಮುಚ್ಚಿ ಹೋಗಿದೆ. ಭಿತ್ತಿಯಲ್ಲಿ ಕುಡ್ಯಸ್ತಂಭಗಳಿದ್ದು ಅವುಗಳ ಮಧ್ಯದಲ್ಲಿ ಶಿವನಿಗೆ ಸಂಬಂಧಿಸಿದ ಪರಿವಾರ ದೇವತೆಗಳನ್ನು ಕೆತ್ತಲಾಗಿದೆ. ಎಲ್ಲವೂ ಭಗ್ನವಾಗಿವೆ ಭಿತ್ತಿಯ ಭಾಗವು ಶಿಥಿಲಾವಸ್ಥೆಯಲ್ಲಿದ್ದು ಕೆಲವೇ ಭಾಗ ಮಾತ್ರ ಉಳಿದಿದೆ. ಪ್ರಸ್ತರವು ಸ್ವಲ್ಪ ಹೊರಚಾಚಿದೆ. ಶಿಖರವು ದ್ರಾವಿಡ ಶೈಲಿಯಲ್ಲಿದ್ದು ಅರ್ಧ ಬಿದ್ದು ಹೋಗಿದೆ. ಇದೊಂದು ದ್ವಿಕೂಟಾಚಲ ದೇವಾಲಯವಾಗಿದೆ. ಈ ದೇವಾಲಯದ ಮುಂದೆ ಇದರ ಮುಂದೆ ಒಂದು ಶಾಸನವಿದೆ.

### ೪.೧.೧೪ ಬೀರಲಿಂಗೇಶ್ವರ ದೇವಾಲಯ

ಅರಸೀಕೆರೆಯಿಂದ ಆರು ಕಿ.ಮೀ. ದೂರದ ಆದಿಹಳ್ಳಿ ಗ್ರಾಮದಲ್ಲಿ ಬೀರಲಿಂಗೇಶ್ವರ ದೇವಾಲಯವಿದೆ. ವಿಜಯನಗರೋತ್ತರ ಕಾಲದ ಈ ದೇವಾಲಯವು ಆದಿಹಳ್ಳಿ ಗ್ರಾಮದಿಂದ ಒಂದು ಕಿ.ಮೀ. ದೂರದಲ್ಲಿ ಪ್ರಕೃತಿಯ ಮಡಿಲಿನಲ್ಲಿದೆ. ಪೂರ್ವಾಭಿಮುಖವಾಗಿದ್ದು, ಗರ್ಭಗೃಹದಲ್ಲಿ ಹಾಸು ಬಂಡೆಯ ಮೇಲೆ ಒಂದರ ಪಕ್ಕ ಒಂದರಂತೆ ಮೂರು ಲಿಂಗಗಳಿವೆ. ಅಂತರಾಳ, ನವರಂಗದಲ್ಲಿ ಸರಳವಾದ ದೊಡ್ಡ ದೊಡ್ಡ ಕಂಬಗಳಿವೆ. ಅವುಗಳಲ್ಲಿ ಚಿಕ್ಕಯ್ಯ, ದೊಡ್ಡಯ್ಯ ಎಂಬ ಪರಿವಾರ ದೇವರುಗಳ ಉಬ್ಬುಶಿಲ್ಪಗಳಿವೆ. ಅಧಿಷ್ಠಾನವು ೩ ಅಡಿ ಎತ್ತರವಾಗಿದೆ. ಭಿತ್ತಿಯು ಸರಳವಾಗಿ ಬೆಣಚುಕಲ್ಲುಗಳಿಂದ ನಿರ್ಮಾಣವಾಗಿದೆ. ಪ್ರಸ್ತರವು ನಾಲ್ಕು ಮೂಲೆಗಳಲ್ಲಿ ಜೋಡಿ ಟಗರುಗಳಿಂದ ಕೂಡಿದ ಒಂದೇ ಮುಖವಿದೆ. ಶಿಖರವು ದ್ರಾವಿಡ ಮಾದರಿಯಲ್ಲಿದೆ. ಈ ದೇವಾಲಯ ಜೀರ್ಣೋದ್ಧಾರವಾಗಿದ್ದು, ಇತ್ತೀಚೆಗೆ ಪ್ರಾಕಾರ ಗೋಡೆಯನ್ನೊಳಗೊಂಡ ಗೋಪುರವನ್ನು ಕಟ್ಟಲಾಗಿದೆ.

ಫೆಬ್ರವರಿ ತಿಂಗಳಿನಲ್ಲಿ ಶಿವರಾತ್ರಿ ಹಬ್ಬ ಮುಗಿದು ಎಂಟು ದಿನಗಳಲ್ಲಿ ಪ್ರತಿವರ್ಷವು ವಿಜೃಂಭಣೆಯಿಂದ ಜಾತ್ರಾ ಮಹೋತ್ಸವವು ನಡೆಯುತ್ತದೆ.

## ೪.೧.೧೫ ಸೋಮೇಶ್ವರ ದೇವಾಲಯ

ಅರಸೀಕೆರೆಯಿಂದ ಹಾಸನಕ್ಕೆ ಹೋಗುವ ಮುಖ್ಯರಸ್ತೆಯಲ್ಲಿ ೮ ಕಿ.ಮೀ. ದೂರದಲ್ಲಿ ಸಿಗುವ ಹಾರನಹಳ್ಳಿ ಹೊಯ್ಸಳ ಕಾಲಕ್ಕೆ ಒಂದು ಅಗ್ರಹಾರವಾಗಿತ್ತು. ೧೩ನೇ ಶತಮಾನದಲ್ಲಿ ೨ನೇ ನರಸಿಂಹನ ಸಹೋದರಿ ಸೋಮಲದೇವಿಯು ಇಲ್ಲಿ ಸೋಮನಾಥಪುರವೆಂಬ ಅಗ್ರಹಾರವನ್ನು ನಿರ್ಮಿಸಿದಳು. ಹೊಯ್ಸಳ ಆಳ್ವಿಕೆಯಲ್ಲಿ ಬ್ರಾಹ್ಮಣರಿಗೆ ಅಗ್ರಹಾರವಾಗಿ ಈ ಗ್ರಾಮವನ್ನು ದತ್ತಿ ನೀಡಿದ್ದರಿಂದ ಈ ಊರಿಗೆ ಹಾರುವನಹಳ್ಳಿ ಎಂದು ನಂತರ ಈಗ ಹಾರನಹಳ್ಳಿ ಎಂದು ಪ್ರಚಲಿತದಲ್ಲಿದೆ. ಈ ಊರಿನಲ್ಲಿ ಕ್ರಿ.ಶ. ೧೦೭೦ ರಲ್ಲಿ ಸೋಮೇಶ್ವರ ಎಂಬ ಹೊಯ್ಸಳ ರಾಜ ಕೋಟೆ ನಿರ್ಮಿಸಿ, ಸಹೋದರಿ ಹೆಸರಿನಲ್ಲಿ ನಾಗರ್ತಿ ಕೆರೆಯನ್ನು ಕಟ್ಟಿಸಿದ್ದಾನೆ.[೧೧]

ಸೋಮೇಶ್ವರ ದೇವಾಲಯವು ಅಪ್ರತಿಮ ಶಿಲ್ಪಕಲಾಕೃತಿಯ ಕೊಡುಗೆಗೆ ಇದು ಸಾಕ್ಷಿಯಾಗಿದೆ. ಕ್ರಿ.ಶ. ೧೨೩೪ ರಲ್ಲಿ ಈ ದೇವಾಲಯವನ್ನು ಕಟ್ಟಲಾಗಿದ್ದು ಒಂದೇ ಗರ್ಭಗುಡಿ ಮೂರು ದ್ವಾರಗಳಿವೆ. ಆದ್ದರಿಂದ ಏಕಕೂಟವಾಗಿದೆ. ನಕ್ಷತ್ರಾಕಾರದ ತಳವಿನ್ಯಾಸದ ಮೇಲೆ ಜಗತಿ ಇದೆ. ಉತ್ತರ, ದಕ್ಷಿಣ, ಪೂರ್ವ ಮೂರು ಕಡೆಯಿಂದಲೂ ದೇವಾಲಯ ಪ್ರವೇಶಕ್ಕೆ ಮೆಟ್ಟಿಲುಗಳಿವೆ. ಉತ್ತರ ಕಡೆಯ ದ್ವಾರವನ್ನು ಈಗ ಮುಚ್ಚಿರುವರು. ಪ್ರಸ್ತುತ ದಕ್ಷಿಣ ದ್ವಾರದಿಂದ ದೇವಾಲಯ ಪ್ರವೇಶವಿದೆ. ಗರ್ಭಗೃಹವು ಪೂರ್ವಾಭಿಮುಖವಾಗಿದ್ದು, ಗರ್ಭಗೃಹದ ದ್ವಾರವು ಸುಂದರವಾಗಿದೆ. ದ್ವಾರಪಾಲಕರು ಲತಾಬಳ್ಳಿಗಳಿದ್ದು ಲಲಾಟಬಿಂಬದಲ್ಲಿ ತಾಂಡವೇಶ್ವರ ಶಿಲ್ಪವಿದೆ. ಗರ್ಭಗುಡಿಯ ಒಳಗೆ ಮೂರು ಶಿಖರಗಳುಳ್ಳ ಗೂಡುಗಳಿವೆ. ಮಧ್ಯದಲ್ಲಿ ಶಿವಲಿಂಗವು ಸಣ್ಣದಾಗಿ ವೃತ್ತಶಿರವಾಗಿ ದೊಡ್ಡ ಪಾಣಿಪೀಠದ ಮೇಲೆ ಇದ್ದು. ಭುವನೇಶ್ವರಿಯಲ್ಲಿ ವಿತಾನದಲ್ಲಿ ಭುವನೇಶ್ವರಿ ಇದೆ. ಸುಖನಾಸಿಯ ಲಲಾಟಬಿಂಬದಲ್ಲಿ ಉಮಾಮಹೇಶ್ವರನ ಶಿಲ್ಪವಿದ್ದು. ದ್ವಾರದ ಇಕ್ಕೆಲಗಳಲ್ಲಿ ಜಾಲಂದ್ರಗಳು ಹಾಗೂ ಭುವನೇಶ್ವರಿಯಲ್ಲಿ ಅಷ್ಟದಿಕ್ಪಾಲಕರು ಇರುವರು. ನವರಂಗದಲ್ಲಿ ಹನ್ನೆರಡು ಅಂಕಣಗಳಿದ್ದು. ಪೂರ್ವದಲ್ಲಿ ಕಲ್ಲಿನ ಕಕ್ಷಾಸನವಿದ್ದು. ಇವುಗಳ ಹಿಂದೆ ಭಿತ್ತಿಯಲ್ಲಿ ಜಾಲಂದ್ರಗಳಿವೆ. ಮೂರು ದ್ವಾರಗಳಲ್ಲಿ ಉತ್ತರದ ದ್ವಾರವನ್ನು ಇತ್ತೀಚೆಗೆ ಮುಚ್ಚಿರುವರು ಮತ್ತು ಒಂದು ವೀರಭದ್ರನ ವಿಗ್ರಹವನ್ನಿಟ್ಟಿರುವರು. ಮೂರು ದ್ವಾರಗಳ ಮೇಲೂ ತಾಂಡವೇಶ್ವರನ ವಿಗ್ರಹಗಳಿವೆ. ನವರಂಗದ ಮಧ್ಯದಲ್ಲಿ ನಂದಿಯ ವಿಗ್ರಹವಿದೆ. ನಾಲ್ಕು ಕಂಬಗಳು ದುಂಡಾಗಿ ಘಂಟಾಕಾರವಾಗಿವೆ. ಮಿಕ್ಕ ಆರು ಕಂಬಗಳಲ್ಲಿ ಹದಿನಾರು ಕೋನಗಳಿಂದ ಕೂಡಿದ್ದು ನಕ್ಷತ್ರಾಕಾರವಾಗಿವೆ. ಪೂರ್ವ ದ್ವಾರದ ಹತ್ತಿರ ಇರುವ ಕಂಬದ ಪೀಠದಲ್ಲಿ ರಾವಣನು ಕೈಲಾಸವನ್ನೆತ್ತುವುದು, ಗೋವರ್ಧನ ದಾರಿ, ವೇಣುಗೋಪಾಲ ಇತ್ಯಾದಿ ಶಿಲ್ಪಗಳನ್ನು ಹೊಂದಿದ್ದು ಇದು ಬೇಲೂರಿನ ನರಸಿಂಹ ಸ್ತಂಭವನ್ನು ಹೋಲುತ್ತದೆ. ನವರಂಗದ ಪಶ್ಚಿಮದ ಗೋಡೆಯಲ್ಲಿ ಆರು ಕೋಷ್ಠಗುಡಿಗಳಿವೆ ಈ ಕೋಷ್ಠಗುಡಿಗಳಲ್ಲಿ ಸಪ್ತ ಮಾತೃಕೆಯರು, ವೀರಭದ್ರ, ಗಣೇಶ, ಸರಸ್ವತಿ, ಮಹಿಷಾಸುರ ಮರ್ದಿನಿ, ಮಯೂರನ ಮೇಲೆ ಷಣ್ಮುಖ ಮತ್ತು ಕೇಶವನ (ಭಗ್ನ) ವಿಗ್ರಹಗಳಿವೆ.

ಹನ್ನೆರಡು ಅಲಂಕೃತ ಸೂಕ್ಷ್ಮಕೆತ್ತನೆಯ ಭುವನೇಶ್ವರಿಗಳಲ್ಲಿ ನಿಂತಿರುವ ಸೂರ್ಯ, ನೃತ್ಯಗಾರರು, ಸಂಗೀತಗಾರರು ಮತ್ತು ಇದರ ಮೇಲೆ ಅಷ್ಟಕೋನ ನಕ್ಷತ್ರಗಳಿವೆ. ದಕ್ಷಿಣ ದ್ವಾರದ ಹತ್ತಿರ ಇರುವ ಭುವನೇಶ್ವರಿಯಲ್ಲಿ ಅಷ್ಟದಿಕ್ಪಾಲಕರಿದ್ದಾರೆ, ಇತರ ಭುವನೇಶ್ವರಿಗಳಲ್ಲಿ ರೇಖಾಚಿತ್ರಗಳು ಅಷ್ಟದಿಕ್ಪಾಲಕರು ಹೀಗೆ ಒಂದೊಂದು ಭುವನೇಶ್ವರಿಗಳಲ್ಲಿಯೂ ಬೇರೆ–ಬೇರೆ ರೀತಿಯಲ್ಲಿದ್ದು. ಕರ್ಣಿಕೆಯಲ್ಲಿ ತಾಂಡವೇಶ್ವರನ ಶಿಲ್ಪವಿದೆ.[೧೨]

ಅಧಿಷ್ಠಾನದಲ್ಲಿ ಉಪಪೀಠ, ವೃತ್ತಕುಮುದ ಹಾಗೂ ಸರಳ ಪಟ್ಟಿಕೆಗಳಿವೆ. ಸುಮಾರು ಮೂರು ಅಡಿ ಎತ್ತರವಾಗಿದೆ. ಜಗತಿಯಲ್ಲಿ ಮೂರು ದ್ವಾರಗಳ ಪಕ್ಕದಲ್ಲಿ ಗೋಪುರ ಸಹಿತ ಗೂಡುಗಳಿವೆ. ಒಟ್ಟು ಹನ್ನೆರಡು ಇದ್ದವು. ಈಗ ಕೆಲವು ಹಾಳಾಗಿವೆ. ಭಿತ್ತಿಯ ಪೀಠಿಕೆಯಲ್ಲಿ ನಾಲ್ಕು ಸಾಲು ಚಿತ್ರಪಟ್ಟಿಕೆಗಳಿವೆ. ಆನೆಗಳು ಅಶ್ವಾರೋಹಕರು, ಮಕರ, ಹಂಸಗಳ ಸಾಲನ್ನು ಕೆತ್ತಲಾಗಿದೆ. ಪೌರಾಣಿಕ ಕಥೆಗಳ ಪಟ್ಟಿಕೆ ಖಾಲಿ ಇದೆ. ಭಿತ್ತಿಯಲ್ಲಿ ಎರಡು ಭಾಗಗಳಿದ್ದು ಮೇಲ್ಭಾಗದಲ್ಲಿ ಜಾಲಂದ್ರಗಳು ಲತಾಪಟ್ಟಿಕೆಗಳು ಹಾಗು ಮೂಲೆಗಳಲ್ಲಿ ವ್ಯಾಳಿಗಳಿವೆ, ಕೆಳಗಿನ ಭಾಗದಲ್ಲಿ ಲತಾ ತೋರಣಗಳಿದ್ದು ಅದರ ಕೆಳಗೆ ದೇವತಾ ವಿಗ್ರಹಗಳು ದೇವಾಲಯದ ಸುತ್ತಲೂ ಇವೆ. ಪ್ರಮುಖವಾಗಿ ತಾಂಡವ ಗಣೇಶ, ಉಮಾಮಹೇಶ್ವರ, ಸ್ಥಾನಕ ಶಿವ, (ಅಕ್ಷಮಾಲ, ತ್ರಿಶೂಲ, ಡಮರುಗ ಪಾತ್ರೆ) ಇಬ್ಬರು ದೇವಿಯರು ನೃತ್ಯ ಸರಸ್ವತಿ (ಅಕ್ಷಮಾಲ ಮೂಲ, ಅಂಕುಶ ಪಾಶ, ಪುಸ್ತಕ) ಗರುಡನ ಮೇಲೆ ಕೃಷ್ಣ ಸತ್ಯಭಾಮಾ, ಗರುಡನ ಎಡಗೈಯಲ್ಲಿ ಪಾರಿಜಾತ, ಬಲಗೈಯಲ್ಲಿ ವಜ್ರಾಯುಧ, ವರಾಹ, ಯುವತಿಯೊಬ್ಬಳು ಮೇಲಿನ ಲತೆಯಿಂದ ಹೂವನ್ನು ಕೀಳುತ್ತಿರುವದು, ಹರಿಹರ, ಇಬ್ಬರು ದೇವಿಯರು ಬಲದಲ್ಲಿ ಮತ್ತೊಂದು ದೊಡ್ಡದೇವಿ, ಇವು ನೈರುತ್ಯ ದಿಕ್ಕಿನಲ್ಲಿವೆ. ದಕ್ಷಿಣದಲ್ಲಿ ಉಗ್ರನರಸಿಂಹ, ಲಕ್ಷ್ಮೀ, ಪೀಠದಲ್ಲಿ ಪ್ರಹ್ಲಾದ, ಗರುಡ, ಷಡ್ಭುಜ ನೃತ್ಯಸರಸ್ವತಿ (ವೀಣೆ, ಅಕ್ಷಮಾಲ, ಅಂಕುಶ) ನೃತ್ಯ ಪಾರ್ವತಿ, ನೃತ್ಯ ಶಿವ ರಾಕ್ಷಸನನ್ನು ತುಳೀದು ತ್ರಿಶೂಲದಿಂದ, ಆಕಾಶಕ್ಕೆ ಎತ್ತಿರುವನು(ಅಂದಕಾಸುರ) ಭೈರವ, ಪಶ್ಚಿಮದಲ್ಲಿ ಹನುಮಂತ, ಕಾಳಿಂಗ ಮರ್ಧನ, ನಾಗಿಣಿ ಉತ್ತರದಲ್ಲಿ ತ್ರಿಮುಖ ಶಿವ, ಹರಿಹರ, ಹೂವನ್ನು ಅರ್ಪಿಸುತ್ತಿರುವ ದೇವಿ, ರಾವಣನು ಕೈಲಾಸವನ್ನು ಎತ್ತುತ್ತಿರುವುದು, ಹಲಸಿನ ಹಣ್ಣಿಗಾಗಿ ಕಾದಾಡುವ ಎರಡು ಕಪಿಗಳು ವಾಯುವ್ಯ ಮೂಲೆಯಲ್ಲಿ ಗೋವರ್ಧನಧಾರಿ, ನಾರಾಯಣ, ವೇಣುಗೋಪಾಲ ಭೈರವ ಶವದ ಮೇಲೆ ನೃತ್ಯ ಮಾಡುತ್ತಿರುವುದು. ಮಹಿಷ ಮರ್ಧಿನಿ, ಉತ್ತರ ದ್ವಾರದ ಪಶ್ಚಿಮದಲ್ಲಿ ಕೋದಂಡರಾಮ, ಲಕ್ಷ್ಮಣ, ಹನುಮಂತ, ಸೀತಾ, ಪುಷ್ಪವನ್ನರ್ಪಿಸುತ್ತಿರುವ ಸ್ತ್ರೀ, ನಂದಿಯ ಮೇಲೆ ಉಮಾಮಹೇಶ್ವರರಿದ್ದಾರೆ ಮೇಲ್ಚಾವಣಿಯು ಮರಗೆಲಸದಂತೆ ತೊಲೆಗಳನ್ನು ಹೊಂದಿದೆ.[೧೩] ಪ್ರಸ್ತಾರದ ಮೇಲೆ ಶಿಖರಗಳಿವೆ. ಇತ್ತೀಚೆಗೆ ದಕ್ಷಿಣ ದ್ವಾರದ ಮೇಲೆ ಗಾರೆಯ ನಂದಿಯನ್ನಿಟ್ಟಿರುವರು. ಶಿಖರವು ಸೋಪ್ ಸ್ಟೋನ್ (ಬಳಪದ ಕಲ್ಲು)ನಲ್ಲಿನ ನಾಲ್ಕಂತಸ್ತುಗಳನ್ನು ನಾಶವಾಗಿದೆ. ಈ ಅಂತಸ್ತುಗಳ ಮೇಲೆ ಕೀರ್ತಿಮುಖ, ಯಕ್ಷ ತಾಂಡವೇಶ್ವರ ಇತ್ಯಾದಿ ಶಿಲ್ಪಗಳಿವೆ. ಸುಖನಾಸಿಯ ಮೇಲಿನ ಕೆತ್ತನೆ ಕೆಲಸ ಕಲಾತ್ಮಕವಾಗಿದೆ. ಆದರೆ ಸಳನ ವಿಗ್ರಹ ಹೋಗಿದೆ. ಶಿಖರದ ಮೇಲ್ಭಾಗವನ್ನು ಗಾರೆಯಿಂದ ಇತ್ತೀಚೆಗೆ ಮಾಡಿರುವರು.

### ೪.೧.೧೬ ಕಲ್ಲೇಶ್ವರ ದೇವಾಲಯ

ಅರಸೀಕೆರೆಯಿಂದ ೫ ಕಿ.ಮೀ. ದೂರದ ಕೆಲ್ಲಂಗೆರೆಯಲ್ಲಿ ಈ ದೇವಾಲಯವು ಕೆರೆಯ ಮಧ್ಯದಲ್ಲಿ ಪೂರ್ವಾಭಿಮುಖವಾಗಿದೆ.ಹೊಯ್ಸಳ ಪೂರ್ವಕಾಲಲ್ಲೇ ಪ್ರಸಿದ್ಧವಾಗಿದ್ದ ಈ ಗ್ರಾಮವು ಗಂಗರಕಾಲದಲ್ಲಿ ನಿರ್ಮಾಣಗೊಂಡ ಜೈನ ಬಸದಿಗಳನ್ನು ಹೊಂದಿದ್ದ ಬಣಂಜಿಗರ್ಯೆನೊರ್ವರಿಂದ ಪೋಷಿಸಲ್ಪಟ್ಟಿತ್ತು. ಕ್ರಿ.ಶ. ೧೨೯೪ಳರಲ್ಲಿ ಕೆಲ್ಲಂಗೆರೆಯನ್ನು ಅಗ್ರಹಾರವಾಗಿ ಹೊಯ್ಸಳ ವಿಷ್ಣುವರ್ಧನನು ಮಾರ್ಪಡಿಸಿ ಕೊಡಂಗನೂರಿನಿಂದ ಬ್ರಾಹ್ಮಣರನ್ನು ತನ್ನೊಡನೆ ಕರೆತಂದು ಇಲ್ಲಿ ನೆಲೆಸುವಂತೆ ಮಾಡಿದ ಮೇಲೆ ಇದು ಪ್ರಮುಖ ವಿದ್ಯಾಕೇಂದ್ರವಾಗಿ, ಧಾರ್ಮಿಕ ಕೇಂದ್ರವಾಗಿ, ಶಿವಾಲಯಗಳು, ಕೇಶವಾಲಯಗಳು ನಿರ್ಮಾಣವಾದಿದ್ದವು ಕೂಡಿತು. ಅಷ್ಟೇ ಅಲ್ಲದೆ ಅಲ್ಲಿನ ಕೆರೆಕಟ್ಟೆಗಳ ನಿರ್ವಹಣೆ, ಹಾಗು ನಿರ್ಮಾಣಕ್ಕೆ ಮಹಾಜನರು ವಿಶೇಷ ಗಮನ ನೀಡಿದ್ದು, ಅನೇಕ ದಾನ ದತ್ತಿಗಳನ್ನು ನೀಡಿರುವ ಉಲ್ಲೇಖವಿದೆ.[೧೪]

ದೇವಾಲಯದ ಗರ್ಭಗೃಹದಲ್ಲಿ ಪಾಣಿಪೀಠದ ಮೇಲೆ ಶಿವಲಿಂಗವಿದೆ. ಇದರ ಮುಂದೆ ನಂದಿ ವಿಗ್ರಹವಿದೆ. ನವರಂಗದಲ್ಲಿ ನಾಲ್ಕು ಕಂಬಗಳು ವೃತ್ತಾಕಾರವಾಗಿವೆ. ಬಲಗಡೆ ಗಣೇಶನ ವಿಗ್ರಹ,. ಎಡಗಡೆ ಸಪ್ತಮಾತೃಕೆಯರ ಶಿಲ್ಪವಿದೆ ದೇವಾಲಯದ ಮುಂದೆ ದೀಪಸ್ತಂಭವಿದೆ. ಅಧಿಷ್ಠಾನವು ಮಣ್ಣಿನಲ್ಲಿ ಮುಚ್ಚಿಹೋಗಿದೆ. ಭಿತ್ತಿಯ ಭಾಗವು ಕಲ್ಲು ಮಣ್ಣಿನಿಂದ ನಿರ್ಮಾಣವಾಗಿದೆ.

### ೪.೨ ವೈಷ್ಣವ ದೇವಾಲಯಗಳು

ವೈಷ್ಣವ ಧರ್ಮದ ಪ್ರಾಚೀನತೆಯನ್ನು ಗುರುತಿಸುವುದು ಕಷ್ಟಸಾಧ್ಯವಾದರೂ ಅದು ಪ್ರಬಲಗೊಂಡಿದ್ದು ಹೊಯ್ಸಳ ಪ್ರಾಂತ್ಯಾಧಿಕಾರಿಗಳ ಅವಧಿಯಲ್ಲಿ ಮತ್ತು ವಿಜಯನಗರದ ಅರಸರು ಹಾಗೂ ಪಾಳೆಯಗಾರರ ಅವಧಿಯಲ್ಲಿ ಪ್ರಮುಖ ಧರ್ಮವಾಗಿ ಅಸ್ತಿತ್ವದಲ್ಲಿತ್ತು. ಈ ಅವಧಿಯಲ್ಲಿ ಹಲವು ವೈಷ್ಣವ ದೇವಾಲಯಗಳು ಅರಸೀಕೆರೆ ಪರಿಸರದಲ್ಲಿ ನಿರ್ಮಾಣಗೊಂಡವು.

### ೪.೨.೧ ಲಕ್ಷ್ಮೀ ವೆಂಕಟೇಶ್ವರ / ಮಾಲೇಕಲ್ ತಿರುಪತಿ ದೇವಾಲಯ

ಅರಸೀಕೆರೆಯಿಂದ ೩ ಕಿ.ಮೀ ದೂರದ ತಿರುಪತಿ ಹಳ್ಳಿಯಲ್ಲಿ ಪಾಳೆಯಗಾರರ ಕಾಲದಲ್ಲಿ ಈ ದೇವಾಲಯವು ನಿರ್ಮಾಣವಾಗಿದೆ. ತಿರುಪತಿ ಕ್ರಿ.ಶ. ೧೭೪೪ರ ಶಾಸನದಲ್ಲಿ ಅಮರಗಿರಿ ತಿರುಪತಿಯ ವೆಂಕಟಾಚಲಸ್ವಾಮಿಯ ನಿತ್ಯ ಪಂಡಿತರ ಮತ್ತು ದೀಪಾರಾಧನೆ ಸೇವೆಗೆ ದಾನ ನೀಡಿದ ವಿಷಯವನ್ನು ಉಲ್ಲೇಖಿಸಿದೆ.[೧೫] ಹಾಗೆ ೫ ತಾಮ್ರ ಶಾಸನಗಳು ಸಿಕ್ಕಿವೆ.

ಪೂರ್ವಾಭಿಮುಖವಾಗಿರುವ ಈ ದೇವಾಲಯದ ತಲವಿನ್ಯಾಸವು ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ ತೆರೆದ ಮಂಟಪಗಳನ್ನೊಳಗೊಂಡಿದೆ. ಗರ್ಭಗೃಹದಲ್ಲಿ ವೆಂಕಟೇಶ್ವರನು ಅನಂತಶಯನ ರೀತಿಯಲ್ಲಿ ಆದಿಶೇಷನ ಮೇಲೆ ಮಲಗಿದ್ದಾನೆ. ವೆಂಕಟೇಶ್ವರನ ನಾಭಿಯಲ್ಲಿ ಬ್ರಹ್ಮನಿದ್ದಾನೆ

ಕಾಲಬಳಿ ಶ್ರೀದೇವಿ, ಭೂದೇವಿಯರ ವಿಗ್ರಹಗಳಿವೆ. ಹಿಂದೆ ಲೋಹದ ಪ್ರಭಾವಳಿ ಇದೆ. ಕಪ್ಪು ಶಿಲೆಯನ್ನು ಬಳಸಿ ಈ ವಿಗ್ರಹವನ್ನು ಕೆತ್ತಲಾಗಿದೆ. ಗರ್ಭಗೃಹದ ದ್ವಾರದಲ್ಲಿ ಜಯ–ವಿಜಯ ದ್ವಾರಪಾಲಕರು ಶಂಖ, ಚಕ್ರ, ಗದಾ ಹಿಡಿದಿದ್ದಾರೆ. ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಸುಖನಾಸಿಯಲ್ಲಿ ವೆಂಕಟೇಶ್ವರ, ಶ್ರೀದೇವಿ, ಭೂದೇವಿಯರ ಮೂರು ಅಡಿ ಎತ್ತರದ ಕಂಚಿನ ಉತ್ಸವ ಮೂರ್ತಿಗಳಿವೆ. ನವರಂಗದಲ್ಲಿ ಚೌಕಾಕಾರದ ನಾಲ್ಕು ಸರಳವಾದ ಕಂಬಗಳಿವೆ. ನವರಂಗದಲ್ಲಿ ದಕ್ಷಿಣದ ಗರ್ಭಗೃಹದಲ್ಲಿ ಶ್ರೀ ಲಕ್ಷ್ಮಿಯ ಸುಂದರವಾದ ವಿಗ್ರಹವಿದೆ. ದ್ವಾರಬಂಧದಲ್ಲಿ ಗಜಲಕ್ಷ್ಮಿಯ ಶಿಲ್ಪವಿದ್ದು ಹೂ ಬಳ್ಳಿಗಳಿಂದ ಅಲಕೃತವಾಗಿದೆ. ಉತ್ತರ ದಿಕ್ಕಿಗಿರುವ ದ್ವಾರವನ್ನು "ಸ್ವರ್ಗದ ಬಾಗಿಲು" ಎಂದು ಕರೆಯುತ್ತಾರೆ. ನವರಂಗದ ಮುಂದಿರುವ ಮಂಟಪವು ಸರಳವಾಗಿದ್ದು ಹತ್ತು ಕಂಬಗಳಿವೆ. ದೇವಾಲಯವು ತೆರೆದ ಮುಖ ಮಂಟಪವನ್ನು ಹೊಂದಿದೆ.

ಸರಳಶೈಲಿಯ ಅಧಿಷ್ಠಾನವು ಎರಡು ಅಡಿ ಎತ್ತರವಾಗಿದೆ. ಭಿತ್ತಿಯು ಸರಳವಾಗಿ ಬೆಣಚುಕಲ್ಲುಗಳಿಂದ ನಿರ್ಮಾಣವಾಗಿದೆ ಅದರ ಮೇಲೆ ಸುಣ್ಣವನ್ನು ಬಳಿಯಲಾಗಿದೆ. ಪ್ರಸ್ತರವು ಸ್ವಲ್ಪ ಮುಂಚಾಚಿದೆ. ದ್ರಾವಿಡ ಶೈಲಿಯ ಆಧುನಿಕ ಶಿಖರದಲ್ಲಿ ಸಣ್ಣಕೋಷ್ಟಕಗಳಿವೆ ನಾಲ್ಕು ಮೂಲೆಯಲ್ಲಿಯೂ ವ್ಯಾಳಿಗಳಿವೆ ಮೇಲೆ ಲೋಹದ ಕಳಶವಿದೆ.

ದೇವಾಲಯದ ಸುತ್ತಲೂ ಪೌಳಿಗೋಡೆ ಇದ್ದು ಮಹಾದ್ವಾರವು ಎತ್ತರವಾಗಿದೆ ದೇವಾಲಯದ ಮುಂದೆ ಗರುಡಸ್ತಂಭ, ಪಕ್ಕದಲ್ಲಿಯೇ ಬಲಿಪೀಠವೂ ಇದೆ. ಪೌಳಿಯಿಂದ ಹೊರಗೆ ಸಣ್ಣ ಮಂಟಪ ಅದರ ಪಕ್ಕದಲ್ಲಿ ಉಯ್ಯಾಲೆ ಕಂಬ ಇದೆ. ಮಹಾದ್ವಾರದ ಮುಂದೆ ಎಡಭಾಗಕ್ಕೆ ಸುಂದರವಾದ ಕಲ್ಯಾಣಿ ಇದೆ.

ಹಿರೇಕಲ್ಲು ಬೆಟ್ಟದ ಮೇಲೆ ಪೂರ್ವಾಭಿಮುಖವಾಗಿರುವ ತಿಮ್ಮಪ್ಪ, ಪದ್ಮಾವತಿಯ ದೇವಾಲಯವಿದೆ ವಶಿಷ್ಟ ಮಹಾಋಷಿಗಳು ತಿಮ್ಮಪ್ಪ ಪದ್ಮಾವತಿಯ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿದ್ದಾರೆ ಈ ವಿಗ್ರಹಗಳು ಸುಮಾರು ಐದು ಅಡಿ ಎತ್ತರವಾಗಿ ಸಮಭಂಗಿಯಲ್ಲಿವೆ. ಬೆಟ್ಟದ ಮೇಲಿರುವ ತಿಮ್ಮಪ್ಪನ ದೇವಾಲಯಕ್ಕೆ ಹೋಗಲು ೧೮೦೦ ಮೆಟ್ಟಿಲುಗಳಿವೆ. ಈ ದೇವಾಲಯವನ್ನು ತಿಮ್ಮಪ್ಪ ನಾಯಕನ ಕಾಲದಲ್ಲಿ ನಿರ್ಮಾಣವಾಗಿದೆ. ಬೆಟ್ಟದ ಕೆಳಗೆ ತಿಮ್ಮಪ್ಪನಾಯಕನ ಕೆರೆಯೂ ಸಹ ಇದೆ. ಪ್ರತಿ ವರ್ಷಜುಲೈ ತಿಂಗಳ ಏಕಾದಶಿಯಂದು ಜಾತ್ರಾ ಮಹೋತ್ಸವವು ವಿಜೃಂಭಣೆಯಿಂದ ನಡೆಯುತ್ತದೆ.

### ४.೨.೨ ಪ್ರಾಚೀನ ಆಂಜನೇಯ ದೇವಾಲಯ

ಈ ದೇಗುಲವು ನಗರದಿಂದ ಪೂರ್ವಕ್ಕೆ ಒಂದು ಕಿ.ಮೀ ದೂರದಲ್ಲಿದೆ. ಈ ದೇವಾಲಯವು ದಕ್ಷಿಣಾಭಿಮುಖವಾಗಿದ್ದು ಗರ್ಭಗೃಹದಲ್ಲಿ ಪ್ರಾಚೀನ ವೀರಾಂಜನೇಯನ ವಿಗ್ರಹವು ಆಂಜನೇಯನು

ಒಂದು ಕೈ ಮೇಲೆತ್ತಿದ್ದು ತನ್ನ ಇನ್ನೊಂದು ಕೈಯನ್ನು ಸೊಂಟದ ಬಳಿ ಇಟ್ಟುಕೊಂಡಿರುವನು. ಗರ್ಭಗೃಹದ ದ್ವಾರದಲ್ಲಿ ದ್ವಾರ ಪಾಲಕರಿದ್ದಾರೆ. ನವರಂಗದಲ್ಲಿ ಪೂರ್ವಕ್ಕೆ ಗಣೇಶನ ವಿಗ್ರಹವಿದೆ ಸ್ವಲ್ಪಮುಂದೆ ನವಗ್ರಹಗಳಿವೆ. ಸುಮಾರು ೫೦೦ ವರ್ಷ ಹಳೆಯದಾಗಿದ್ದು ಮೊದಲು ಈ ದೇವಾಲಯವಿರಲಿಲ್ಲ. ಆಂಜನೇಯನ ವಿಗ್ರಹವು ಒಂದು ದೊಡ್ಡಗುಂಡಿಯಲ್ಲಿ ಬಿದ್ದಿರುವುದಾಗಿ ನಂತರದ ಕಾಲದಲ್ಲಿ ಆಧುನಿಕ ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ. ಸರಳವಾದ ಭಿತ್ತಿ ಇದೆ. ಪ್ರಸ್ತರವು ಮುಂಚಾಚಿದ ಮೇಲ್ಭಾವಣಿಯಲ್ಲಿ ಆಂಜನೇಯನ ದೊಡ್ಡದಾದ ಮೂರ್ತಿಯನ್ನು ಗಾರೆಯಿಂದ ಮಾಡಲಾದ್ದು. ಶಿಖರವು ಆಧುನಿಕವಾಗಿದೆ.

**೪.೨.೩ ಕೇಶವ ದೇವಾಲಯ :**

ಚಿಕ್ಕಗಂಡಸಿಯ ಊರ ಮಧ್ಯದಲ್ಲಿ ಈ ದೇವಾಲಯವಿದೆ. ಕ್ರಿ.ಶ. ೧೫೩೫ರ ಶಾಸನದಲ್ಲಿ ಸಂದರಾಮತದ ಉಲ್ಲೇಖವನ್ನು ನೀಡಿದೆ. ಅಲ್ಲದೆ ಚಿಕ್ಕ ಗಂಡಸಿಯನ್ನು ಬ್ರಾಹ್ಮಣರಿಗೆ ಅಗ್ರಹಾರವನ್ನು ದಾನ ಗ್ರಾಮವಾಗಿ ವಿಜಯನಗರದ ಅಚ್ಯುತರಾಯನ ಅಧಿಕಾರಿ ಅಮರ ನಾಯಕ ಬಯಕಾರ ರಾಮಪ್ಪಯ್ಯನಿಗೆ ನೀಡಿರುವ ಉಲ್ಲೇಖವಿದೆ.[೧೬]

ಕೇಶವ ದೇವಾಯವು ಪೂರ್ವಾಭಿಮುಖವಾಗಿದ್ದು ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಸುಮಾರು ನಾಲ್ಕು ಅಡಿ ಎತ್ತರದ ಕಪ್ಪು ಶಿಲೆಯ ಕೇಶವನ ವಿಗ್ರಹ ಪ್ರತಿಷ್ಠಾಪಿಸಲಾಗಿದೆ. ಕೇಶವ ತನ್ನ ಕೈಗಳಲ್ಲಿ ಶಂಖ, ಚಕ್ರ, ಗದಾ ಅಭಯ ಹಸ್ತ ಹಿಡಿದಿರುವನು. ಸುಖನಾಸಿ ಚಿಕ್ಕದಾಗಿದ್ದು. ದ್ವಾರದಲ್ಲಿ ದ್ವಾರ ಪಾಲಕರಿದ್ದಾರೆ. ನವರಂಗದಲ್ಲಿ ಎರಡು ಭುವನೇಶ್ವರಗಳಿದ್ದು. ನಾಲ್ಕು ಕಂಬಗಳು ವೃತ್ತಾಕಾರವಾಗಿ ಘಟ, ಫಲಕ ಬೋದಿಗೆಯಿಂದ ಕೂಡಿದೆ. ನವರಂಗದ ದಕ್ಷಿಣ ಗರ್ಭಗೃಹದಲ್ಲಿ ವೇಣುಗೋಪಾಲನ ಸುಂದರವಾದ ಏಕಶಿಲಾ ವಿಗ್ರಹವಿದೆ. ತನ್ನ ಕೈಯಲ್ಲಿ ಕೊಳಲನ್ನು ಹಿಡಿದುಕೊಂಡು ವಸ್ತ್ರಾಭರಣಗಳಿಂದ ಅಲಂಕೃತವಾಗಿರುವನು. ಮುಖಮಂಟಪದಲ್ಲಿ ೪ ಕಂಬಗಳಿದ್ದು ಎರಡು ವೃತ್ತಾಕಾರ ಉಳಿದ ಎರಡು ಕಂಬಗಳು ಸೂಕ್ಷ್ಮ ಕೆತ್ತನೆಯಿಂದ ಅಲಂಕೃತವಾಗಿವೆ. ಕೆಳಗೆ ಪೀಠ, ಪಾದ, ದಂಡವು ಬಳೆಯಾಕಾರವಾದ್ದು ಘಟ, ಫಲಕ, ಬೋದಿಗೆಯು ಅಲಂಕೃತವಾಗಿದೆ. ಮುಖಮಂಟಪದಲ್ಲಿ ಎರಡು ಕಡೆ ಕುಳಿತುಕೊಳ್ಳಲು ಕಕ್ಷಾಸನವಿದೆ. ಅವುಗಳ ಪಾರ್ಶ್ವದಲ್ಲಿ ಕ್ರಿ.ಶ. ೧೫-೧೬ನೇ ಶತಮಾನದ ಶಾಸನವನ್ನು ಬರೆಯಲಾಗಿದೆ. ಭುವನೇಶ್ವರದಲ್ಲಿ ಹೂಬಳ್ಳಿಯ ಮತ್ತು ಶಂಖದ ಸಾಲುಗಳಿವೆ ಸುತ್ತಲೂ ಅಷ್ಟದಿಕ್ಪಾಲಕರಿದ್ದಾರೆ.

ಸರಳ ಶೈಲಿಯ ಅಧಿಷ್ಠಾನವು ಎತ್ತರವಾಗಿದೆ. ಭಿತ್ತಿಯಲ್ಲಿ ಯಾವುದೇ ಅಲಂಕಾರಗಳಿಲ್ಲ ಪ್ರಸ್ತರವು ಸ್ವಲ್ಪ ಮುಂಚಾಚಿದ್ದು ಶಿಖರವು ಶಿಥಿಲವಾಗಿದೆ.

### ೪.೨.೪ ಚನ್ನಕೇಶವ ದೇವಾಲಯ

ಅರಸೀಕೆರೆಯಿಂದ ೮ ಕಿ.ಮೀ. ದೂರದ ದೊಡ್ಡಗಂಡಸಿಯಲ್ಲಿ ಚನ್ನಕೇಶವ ದೇವಾಲಯವಿದೆ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ಗರ್ಭಗೃಹದಲ್ಲಿ ಚನ್ನಕೇಶವನ ವಿಗ್ರಹವನ್ನು ಪದ್ಮಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ತನ್ನ ಕೈಗಳಲ್ಲಿ ಶಂಖ, ಚಕ್ರ, ಪದ್ಮ, ಹಿಡಿದಿರುವನು, ಅಂತರಾಳ ಸರಳವಾಗಿದೆ. ನವರಂಗವನ್ನು ೬ ಕಂಬಗಳು ವೃತ್ತಾಕಾರವಾಗಿ ಅಲಂಕೃತವಾಗಿವೆ. ಮುಖಮಂಟಪದಲ್ಲಿ ೪ ಸರಳವಾದ ಕಂಬಗಳಿವೆ. ದೇವಾಲಯದ ಸುತ್ತಲೂ ಪ್ರಾಕಾರ ಗೋಡೆ ಇದೆ. ಚಿಕ್ಕದಾದ ದ್ವಾರಬಾಗಲಿದೆ ದೇವಾಲಯ ಪ್ರವೇಶಿಸಲು ೮ ಸೋಪಾನಗಳಿವೆ. ಅಧಿಷ್ಠಾನವು ೩ ಅಡಿ ಎತ್ತರವಾಗಿದೆ. ಭಿತ್ತಿಯು ಗಾರೆಕಲ್ಲುಗಳಿಂದ ನಿರ್ಮಾಣ ಮಾಡಲಾಗಿದೆ. ಶಿಖರವು ದ್ರಾವಿಡ ಶೈಲಿಯಲ್ಲಿ ಚಿಕ್ಕದಾಗಿದ್ದು ಮೇಲೆ ಕಳಶವಿದೆ.

### ೪.೨.೫ ಆಂಜನೇಯ ದೇವಾಲಯ

ಅದೇ ಊರಿನ ಕೆರೆಯ ದಡದಲ್ಲಿ ಆಂಜನೇಯ ದೇವಾಲಯವಿದೆ. ಗಂಡಸಿ ಕ್ರಿ.ಶ. ೧೪೦೩ರ ಶಾಸನದಲ್ಲಿ ಬಾಯಣ್ಣನೆಂಬಾತು ತನ್ನ ತಾಯಿಯ ಹೆಸರಿನಲ್ಲಿ ಮಹಾಪೂರವೆಂಬ ಗ್ರಾಮವನ್ನು ನಿರ್ಮಿಸಿ, ಅಲ್ಲಿ ಕೆರೆಯನ್ನು ಕಟ್ಟಿಸಿದ, ಆ ಕೆರೆಯ ದಕ್ಷಿಣ ಭಾಗದಲ್ಲಿ ಕೋಡಿಯನ್ನು ನಿರ್ಮಿಸಿದ ಅಲ್ಲದೆ ಹಿರಿಯ ಗಂಡಸಿಯ ಅಗ್ರಹಾರವನ್ನು ಜೀರ್ಣೋದ್ಧಾರ ಮಾಡಿ, ಅಲ್ಲಿನ ಕೆರೆಯ ಕಾಲುವೆಗೆ ರಕ್ಷಣಾರ್ಥವಾಗಿ ಊರ ಮುಂದೆ ಹನುಮಂತನ ದೇವಸ್ಥಾನ ಪ್ರತಿಷ್ಠಾಪನೆ ಮಾಡಿಸಿದ ಉಲ್ಲೇಖವಿದೆ.[೧೬] ಈ ದೇವಾಲಯವು ದಕ್ಷಿಣಾಭಿಮುಖವಾಗಿದ್ದು ಗರ್ಭಗೃಹದಲ್ಲಿ ದೊಡ್ಡದಾದ ಬಂಡೆಯಲ್ಲಿ ವೀರಾಂಜನೆಯನ ಏಕ ಶಿಲಾ ವಿಗ್ರಹವಿದೆ. ಮೇಲೆ ಸೂರ್ಯ, ಚಂದ್ರರಿದ್ದಾರೆ. ಆಂಜನೇಯ ಒಂದು ಕೈಯನ್ನು ಮೇಲಕ್ಕೆ ಎತ್ತಿದ್ದು ಮತ್ತೊಂದು ಕೈಯನ್ನು ಸೊಂಟದ ಮೇಲೆ ಇಟ್ಟು ಕೊಂಡಿದ್ದಾನೆ. ಮುಖಮಂಟಪವಿದೆ. ಗೋಡೆಯಲ್ಲಿ ಎರಡು ಶಾಸನಗಳಿವೆ. ದೇವಾಲಯದ ಮುಂದೆ ದೀಪ ಸ್ತಂಭವಿದೆ. ಸರಳವಾದ ಭಿತ್ತಿಯು ಗಾರೆ ಕಲ್ಲುಗಳಿಂದ ನಿರ್ಮಾಣವಾಗಿದ್ದು. ಪ್ರಸ್ತರದ ಮೇಲೆ ಹೂಬಳ್ಳಿಯಿಂದ ಅಲಂಕೃತವಾಗಿದೆ. ಶಿಖರವು ದ್ರಾವಿಡ ಶೈಲಿಯಲ್ಲಿದ್ದು ಆಮಲಕದ ಮೇಲೆ ಲೋಹದ ಕಳಶವಿದೆ.

### ೪.೨.೬ ಕೇಶವ ದೇವಾಲಯ

ಮತ್ತೊಂದು ಕೇಶವನ ದೇವಾಲಯವು ಗಂಡಸಿಯಿಂದ ಒಂದು ಕಿ.ಮೀ ದೂರದ ಹೆಗ್ಗಟ್ಟ ಗ್ರಾಮದಲ್ಲಿದೆ. ಹೋಯ್ಸಳರ ಕಾಲದ ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಕಪ್ಪು ಶಿಲೆಯಿಂದ ಮಾಡಿದ ಕೇಶವನ ಸುಂದರವಾದ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಕೇಶವ ತನ್ನ ಕೈಗಳಲ್ಲಿ ಶಂಕ, ಚಕ್ರ, ಅಭಯ, ಗದಾ ಹಿಡಿದಿರುವನು. ಗರ್ಭಗೃಹದ ದ್ವಾರದಲ್ಲಿ ದ್ವಾರಪಾಲಕರಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಸುಖನಾಸಿಯಲ್ಲಿ

ಭುವನೇಶ್ವರವು ಅಲಂಕೃತವಾಗಿದೆ. ನವರಂಗದ ನಾಲ್ಕು ಕಂಬಗಳು ತಿರುಗಣಿಯಂತ್ರದಿಂದ ಮಾಡಿದ್ದು. ಚಿಕ್ಕದಾಗಿವೆ. ಕೆಳಗೆ ಪೀಠ, ಪಾದ, ದಂಡವು ಬಳೆಯಾಕಾರವಾಗಿದ್ದು. ಘಟ, ಫಲಕ, ಪುಷ್ಪ ಬೋದಿಗೆ ಇದೆ. ಉಳಿದ ಹನ್ನೆರಡು ಅರೆಗಂಬಗಳಿದ್ದು ನವರಂಗವನ್ನು ಪ್ರವೇಶಿಸಲು ಐದು ಸೋಪಾನಗಳಿವೆ. ಅಧಿಷ್ಠಾನವು ಮುಚ್ಚಿಹೋಗಿದ್ದು. ಭಿತ್ತಿಯು ಸರಳವಾಗಿದೆ. ಪ್ರಸ್ತರದ ಭಾಗದ ಮೇಲ್ಛಾವಣಿಯ ಕೋಷ್ಠಗಳಲ್ಲಿ ಸರಸ್ವತಿ, ಕೇಶವ, ಸುಬ್ರಮಣ್ಯನ ಮೂರ್ತಿಶಿಲ್ಪಗಳಿವೆ. ಶಿಖರವು ದ್ರಾವಿಡ ಮಾದರಿಯಲ್ಲಿ ಆಧುನಿಕವಾಗಿದೆ. ದೇವಾಲಯವು ಜೀರ್ಣೋದ್ಧಾರಗೊಂಡಿದೆ.

### ೪.೨.೭ ಚನ್ನಕೇಶವ ದೇವಾಲಯ

ಹಾರನಹಳ್ಳಿ ಕ್ರಾಸ್‌ಗೆ ಆರು ಕಿ.ಮೀ. ದೂರದಲ್ಲಿ ಹುಲ್ಲೇಕೆರೆ ಇದೆ. ಈ ಗ್ರಾಮದ ಪಶ್ಚಿಮದಲ್ಲಿ ಹೊಯ್ಸಳರ ಕಾಲದ ಸೋಪ್‌ಸ್ಟೋನ್‌ನ ಸುಂದರವಾದ ಚನ್ನಕೇಶವ ದೇವಾಲಯವಿದೆ. ದೇವಾಲಯದ ಆಗ್ನೇಯ ದಿಕ್ಕಿಗಿರುವ ಶಾಸನದಿಂದ ಹೊಯ್ಸಳ ಒಂದನೇ ನರಸಿಂಹನ ಸರ್ವಾಧಿಕಾರಿ ಹೆಗ್ಗಡೆ ಮಹಾದಂಡ ನಾಯಕನಾದ ಬೂಚಿರಾಜನು ಚಕ್ರವರ್ತಿಯಿಂದ ಹುಲ್ಲೇಕೆರೆಯನ್ನು ಪಡೆದು ಸೋಮನಾಥಪುರವೆಂಬ ಅಗ್ರಹಾರವನ್ನು ಮಾಡಿ ಅಲ್ಲಿ ಕೇಶವ ದೇವಾಲಯವನ್ನು ಕ್ರಿ.ಶ. ೧೧೬೩ರಲ್ಲಿ ಕಟ್ಟಿಸಿದನೆಂದು ಶಾಸನದಿಂದ ತಿಳಿದುಬರುತ್ತದೆ.[೧೮] ಹುಲ್ಲೇಕೆರೆ ಕ್ರಿ.ಶ. ೧೧೭೩ರ ಮತ್ತೊಂದು ಶಾಸನದಲ್ಲಿ ಈ ದೇವಾಲಯಕ್ಕೆ ಗದ್ದೆಯನ್ನು ದಾನವಾಗಿ ಕೊಟ್ಟಿರುವ ಉಲ್ಲೇಖವಿದೆ. ಅದೇ ಕಲ್ಲಿನ ಪಾರ್ಶ್ವದಲ್ಲಿ ೧೨೫೪ರಲ್ಲಿ ಸುಗ್ಗಿಯ ಹಣವನ್ನು ಚನ್ನಕೇಶವ ದೇವರಿಗೆ ದಾನವಾಗಿ ಕೊಟ್ಟಿದ್ದಾರೆ. ಹಾಗೆ ಚನ್ನಕೇಶವನ ಹಲವು ನಾಮಗಳಾದ ಶ್ರೀ ನಾರಾಯಣ, ಶ್ರೀಮಾದವ, ಶ್ರೀಧಾಮೋಧರ, ಶ್ರೀ ವಾಸುದೇವ ಎಂಬ ಹೆಸರುಗಳ ಉಲ್ಲೇಖವಿದೆ.[೧೯]

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಕೇಶವನ ವಿಗ್ರಹವು ಸಮಭಂಗಿಯಲ್ಲಿ ಸಮಾರು ಆರು ಅಡಿ ಎತ್ತರವಾಗಿದೆ. ತನ್ನ ಕೈಯಲ್ಲಿ ಶಂಕ, ಚಕ್ರ, ಗದಾ, ಪದ್ಮವನ್ನು ಹಿಡಿದಿರುವನು ಪ್ರಭಾವಳಿಯು ಪರಿಚಾರಿಕೆಯರೊಂದಿಗೆ ಕೂಡಿ ಸುಂದರವಾಗಿದೆ. ಗರ್ಭಗೃಹದ ದ್ವಾರದಲ್ಲಿ ದ್ವಾರಪಾಲಕರಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮೀಯ ಶಿಲ್ಪವಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ಭುವನೇಶ್ವರವು ಸೂಕ್ಷ್ಮ ಕೆತ್ತನೆಗಳಿಂದ ಕೂಡಿದೆ. ತೆರೆದ ಸುಖನಾಸಿಯಲ್ಲಿ ಸುಂದರವಾದ ಭುವನೇಶ್ವರವಿದೆ ಮತ್ತು ನವರಂಗದಲ್ಲಿ ಒಂಬತ್ತು ಅಂಕಣಗಳಿದ್ದು ಮಧ್ಯದಲ್ಲಿ ಸ್ವಲ್ಪ ಎತ್ತರಿಸಿರುವ ಜಗತಿಯಿದೆ. ಮಧ್ಯದ ನಾಲ್ಕು ಕಂಬಗಳು ದುಂಡಾಗಿ ಘಂಟಾಕಾರವಾಗಿವೆ ವಾಯುವ್ಯ ಸ್ತಂಭದ ಪೀಠದಲ್ಲಿ ತೋರಣದ ಕೆಳಗೆ ಇಬ್ಬರು ನೃತ್ಯಮಾಡುತ್ತಿರುವ ಶಿಲ್ಪಗಳು ಭುವನೇಶ್ವರಗಳಲ್ಲಿ ರೇಖಾಚಿತ್ರಗಳು ಮತ್ತು ಅಷ್ಟದಿಕ್ಪಾಲಕರಿದ್ದಾರೆ. ಮಧ್ಯದ ಭುವನೇಶ್ವರದಲ್ಲಿ ಪದ್ಮಲಂಕೃತವಾಗಿ ಅದರ ಕರ್ಣಿಕೆಯಲ್ಲಿ ಕಾಳಿಂಗಮರ್ಧನ ಶಿಲ್ಪವಿದೆ. ಮುಖಮಂಟಪದ ಮೆಟ್ಟಿಲುಗಳ ಪಕ್ಕದಲ್ಲಿ ಎರಡು ಸುಂದರವಾದ ಆನೆಗಳ ಕಾಲಿನ ಹತ್ತಿರ ಪದಾತಿಗಳು ಇದ್ದಾರೆ. ಮುಖಮಂಟಪದಲ್ಲಿರುವ ಭುವನೇಶ್ವರದಲ್ಲಿ ಹೂಬಳ್ಳಿಯ ಪಟ್ಟಿಕೆ. ಸೈನಿಕರು, ನೃತ್ಯಗಾರರ ಸಾಲುಗಳು ಇದ್ದು ಎರಡುಕಡೆ ಕಕ್ಷಾಸನವಿದೆ.

ಅಧಿಷ್ಠಾನದಲ್ಲಿ ಐದು ಪಟ್ಟಿಕೆಗಳಿವೆ. ನೃತ್ಯ ಮಾಡುವವರು ಮದನಿಕಾ ವಿಗ್ರಹಗಳ ಸಾಲು ಹೂಬಳ್ಳಿಯ ನಂತರ ಸಿಂಹಗಳ ಸಾಲು, ನೃತ್ಯವಾದ್ಯವೃಂದದವರ ಸಾಲುಗಳಿವೆ. ಭಿತ್ತಿಯಲ್ಲಿ ಕುಡ್ಯಸ್ತಂಭಗಳ ಮಧ್ಯದಲ್ಲಿ ವಿಷ್ಣುವಿನ ವಿವಿಧ ರೂಪಗಳಾದ ಶಂಕ, ಚಕ್ರ, ಪದ್ಮ, ಗದಾಗಳನ್ನು ಬೇರೆ ಬೇರೆ ಕೈಗಳಲ್ಲಿರುವ ಚತುರ್ವಿಂಶಕರೂಪ ಎಂದು ಕರೆಯಲ್ಪಡುವ ಮೂರ್ತಿ ವಿನ್ಯಾಸಗಳ ಕೆತ್ತನೆ ವಿಶೇಷವಾಗಿದೆ. ಅವುಗಳ ಕೆಳಗೆ ಹೆಸರುಗಳೂ ಇದ್ದು ಲತಾತೋರಣಗಳು ಸಿಂಹಮುಖಗಳ ಶಿಖರಗಳಿವೆ. ಪ್ರಸ್ತರವು ಸುಂದರವಾಗಿದ್ದು ಸುತ್ತಲೂ ಸೂಕ್ಷ್ಮಕುಸುರಿ ಕೆಲಸ ದೇವಾಲಯಕ್ಕೆ ಕಿರೀಟ ಪ್ರಾಯವಾಗಿದೆ. ಕುಸುರಿ ಕೆತ್ತನೆ ಯಕ್ಷ ಯಕ್ಷಿಯರ ಪಟ್ಟಿ. ಶಿಖರಗಳು ಮಕರ, ದೇವಾತಾ ವಿಗ್ರಹಗಳು ವೈಷ್ಣವ ಮೂರ್ತಿಗಳನ್ನು ಅಳವಡಿಸಲಾಗಿದೆ. ಶಿಖರದಲ್ಲಿ ಮೂರು ಅಂತಸ್ತುಗಳಿದ್ದು ಸುತ್ತಲೂ ಉಗ್ರನರಸಿಂಹ, ಲಕ್ಷ್ಮೀನರಸಿಂಹ, ಹಿರಣ್ಯ ಕಶ್ಯಪುವಿನ ಸಂಹಾರ ಶಿಲ್ಪ, ಗೋವರ್ಧನಧಾರಿ ಕೇಶವ, ವೇಣುಗೋಪಾಲ, ಹರಿಹರ, ತ್ರಿವಿಕ್ರಮ, ಕಾಳಿಂಗ ಮರ್ಧನನ ಶಿಲ್ಪಗಳನ್ನು ಅದ್ಭುತವಾಗಿ ಕೂಡಿಸಿದ್ದಾರೆ. ಮೇಲೆ ಶಿಲಾ ಕಳಶವಿದ್ದು ಶಿಖರದ ಪೂರ್ವಕ್ಕೆ ಸಳನು ಹುಲಿಯನ್ನು ಕೊಲ್ಲುತ್ತಿರುವ ಹೊಯ್ಸಳ ಲಾಂಛನದ ಆಕರ್ಷಕ ಮೂರ್ತಿಯ ಕೆತ್ತನೆಯಲ್ಲಿ ವೃತ್ತಾಕಾರದ ಹುಲಿಯ ಬಾಲದಲ್ಲಿ ಮಹಿಷಾಸುರ ಮರ್ದಿನಿ ವಿಗ್ರಹವಿರುವುದು ವಿಶೇಷವಾಗಿದೆ. ಸಳನ ವಿಗ್ರಹದ ಮುಂಭಾಗದ ಶಿಖರ ಲಾಂಛನ ಫಲಕದಲ್ಲಿ ಕೇಶವನ ಶಿಲ್ಪವಿದೆ. ಚಾಮರದಾರಿಗಳು, ಗರುಡ ಕೀರ್ತಿಮುಖ ಪ್ರಭಾವಳಿಯಿಂದ ಕೂಡಿದ ಕೇಶವ ಶಿಲ್ಪ ಮನೋಹರವಾಗಿದೆ.[೨೦]

ದೇವಾಲಯದ ಸುತ್ತಲೂ ಸಾಲುಕಂಬಗಳಿಂದ ಕೂಡಿದ ಪೌಳಿಯು ಇದೆ. ಪ್ರವೇಶ ದ್ವಾರದಲ್ಲಿ ನಾಲ್ಕು ಕಂಬಗಳಿದ್ದು ವೃತ್ತಾಕಾರವಾಗಿ ಅಲಂಕೃತವಾಗಿವೆ. ಸೂಕ್ಷ್ಮ ಕಲಾಕೃತಿಯಿಂದ ಕೂಡಿದ ಭುವನೇಶ್ವರಿ ಇದ್ದು ಪ್ರವೇಶ ದ್ವಾರಕ್ಕೆ ಹತ್ತು ಸೋಪಾನಗಳಿವೆ.

### ೪.೨.೮ ಲಕ್ಷ್ಮೀ- ನಾರಾಯಣ ದೇವಾಲಯ

ಅರಸೀಕೆರೆಯಿಂದ ೫ ಕಿ.ಮೀ. ದೂರದ ಕೆಲ್ಲಂಗೆರೆ ಗ್ರಾಮದಲ್ಲಿ ಈ ದೇವಾಲಯವಿದೆ. ೧೦-೧೧ ನೇ ಶತಮಾನದಲ್ಲಿ ಲಕ್ಷ್ಮೀ ನಾರಾಯಣ ದೇವಾಲಯದ ಛಾವಣಿಗೆ ಹಾಸಲಾಗಿರುವ ಶಾಸನದಲ್ಲಿ ಬಿದುಗ ಜಿನಾಲಯ ಮತ್ತು ಸಿಂದಾಚಾರ್ಯ ಹಾಗೂ ಕುಂದಕುಂದಾಯನ್ವಯ ಚಾರುಕೀರ್ತಿ ಭಟ್ಟಾರಕರ ಉಲ್ಲೇಖಗಳಿವೆ.[೨೧] ಕೆರೆಯೊಳಗೆ ಸಂಧ್ಯಾಮಂಟಪದ ಬಳಿ ಶಾಸನದಲ್ಲಿ ಹೊಯ್ಸಳ ನರಸಿಂಹದೇವನ ಉಲ್ಲೇಖ ಮತ್ತು ಹರಿಹರಪುರ ಎಂಬ ಹೆಸರು ಉಲ್ಲೇಖಿಸಿದೆ. ಈ ದೇವಾಲಯವು ಪಶ್ಚಿಮಾಭಿಮುಖವಾಗಿದ್ದು ಗರ್ಭಗೃಹದಲ್ಲಿ ಲಕ್ಷ್ಮೀನಾರಾಯಣನ ವಿಗ್ರಹವಿದೆ. ಪಕ್ಕದಲ್ಲಿ ಲಕ್ಷ್ಮೀಯನ್ನು ಕೂರಿಸಿಕೊಂಡಿದ್ದಾನೆ. ಹಿಂದೆ ವಿಶಾಲವಾದ ಪ್ರಭಾವಳಿಯಿದ್ದು, ಗರ್ಭಗೃಹದ ಬಾಗಿಲು ಅಲಂಕೃತವಾಗಿದೆ. ಸುಖನಾಸಿಯ ದ್ವಾರದಲ್ಲಿ ಜಯ ವಿಜಯ ದ್ವಾರಪಾಲಕರಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ದ್ವಾರದ ಇಕ್ಕೆಲಗಳಲ್ಲಿ ಜಾಲಂದ್ರಗಳಿವೆ. ಸಭಾಮಂಟಪದಲ್ಲಿ ಬಲಗಡೆ ಗಣೇಶನ ವಿಗ್ರಹ ಎಡಗಡೆ ಶಕ್ತಿ

ದೇವತೆಯಾದ ಮಹಿಷಮರ್ಧಿನಿಯ ವಿಗ್ರಹ ವಿಶೇಷವಾಗಿದೆ. ಈ ಮಂಟಪದ ನಾಲ್ಕು ಕಂಬಗಳು ಅಷ್ಟಕೋನಾಕಾರವಾಗಿ ಘಟ, ಫಲಕ ಬೋದಿಗೆಯಿಂದ ಕೂಡಿದೆ. ಮುಖ ಮಂಟಪದಲ್ಲಿ ನಾಲ್ಕು ಕಂಬಗಳು ವೃತ್ತಾಕಾರವಾಗಿದ್ದು ಬೋದಿಗೆಯು ಅಲಂಕಾರಿಕವಾಗಿದೆ.

ಸರಳ ಶೈಲಿಯ ಅಧಿಷ್ಠಾನ ಭಿತ್ತಿಯು ಕಲ್ಲು ಗಾರೆಯಿಂದ ನಿರ್ಮಾಣವಾಗಿದೆ. ಪ್ರಸ್ತರವು ಸ್ವಲ್ಪಹೊರಚಾಚಿದ್ದು. ಆಧುನಿಕ ಶಿಖರದ ಸ್ತೂಪಿಯಲ್ಲಿ ಕಳಶವಿದೆ, ದೇವಾಲಯದ ಮುಂದೆ ಬಲಿಪೀಠವಿದ್ದು ಸುತ್ತಲೂ ಪೌಳಿ ಗೋಡೆ ಇದೆ.

**೪.೨.೯ ತಿರುಮಲ ದೇವಾಲಯ**

ಈ ದೇವಾಲಯವು ನಗರದಿಂದ ೮ ಕಿ.ಮೀ. ದೂರದ ಕಲ್ಲನಾಯಕನ ಹಳ್ಳಿ ಗ್ರಾಮದ ತ್ರಿಕೂಟಾಚಲ ದೇವಾಲಯವಾಗಿದ್ದು, ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾಗಿದೆ. ಕಾಳೆನಾಯಕನು ಈ ಊರನ್ನು ಆಳುತ್ತಿದ್ದರಿಂದ ಕಲ್ಲನಾಯಕನಹಳ್ಳಿ ಎಂಬ ಐತಿಹ್ಯವಿದೆ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಶ್ರೀಕೇಶವನ ವಿಗ್ರಹವಿದೆ. ತನ್ನ ಕೈಗಳಲ್ಲಿ ಶಂಖ, ಚಕ್ರ, ಗದಾ, ಅಭಯ ಹಸ್ತವಿದೆ. ಕೀರ್ತಿಮುಖದಲ್ಲಿ ಚಾಮರದಾರಿಯರಿದ್ದು ದ್ವಾರದ ಇಕ್ಕೆಲಗಳಲ್ಲಿ ಸಣ್ಣ–ಸಣ್ಣ ಜಾಲಂಧ್ರಗಳಿವೆ. ಅಂತರಾಳ, ನವರಂಗದ ದಕ್ಷಿಣ ಗರ್ಭಗೃಹದಲ್ಲಿ ಶ್ರೀಲಕ್ಷ್ಮಿಯ ವಿಗ್ರಹವಿದೆ. ತನ್ನ ಕೈಯಲ್ಲಿ ಶಂಖ, ಚಕ್ರ, ವರದಹಸ್ತ, ಅಭಯವಿದ್ದು ಹಿಂದೆ ಪ್ರಭಾವಳಿ ಇದೆ ಉತ್ತರದ ಗರ್ಭಗೃಹದಲ್ಲಿ ಪೀಠದ ಮೇಲೆ ತಿರುಮಲನ ವಿಗ್ರಹವಿದೆ. ಚಕ್ರ, ಶಂಖ, ಅಭಯ ಹಸ್ತ, ಗದಾಹಿಡಿದಿರುವನು. ಅಲಂಕೃತ ಕೀರ್ತಿಮುಖವಿದ್ದು ಕಾಲಿನ ಹತ್ತಿರ ಉಪದೇವತೆಯರಿದ್ದಾರೆ. ನವರಂಗದ ನಾಲ್ಕು ಕಂಬಗಳು ಸರಳವಾಗಿವೆ. ಮುಖಮಂಟಪದ ಕಂಬಗಳು ಚೌಕಾಕಾರವಾಗಿದ್ದು ಫಲಕ ಬೋದಿಗೆ ಯಿಂದ ಕೂಡಿದೆ ದ್ವಾರದಲ್ಲಿ ದ್ವಾರಪಾಲಕರಿದ್ದಾರೆ. ದೇವಾಲಯದ ಮುಂದೆ ಧ್ವಜಸ್ತಂಬದ ಪಕ್ಕದಲ್ಲಿ ಬಲಿಪೀಠವೂ ಇದೆ. ಭಿತ್ತಿಯು ಕಲ್ಲು ಗಾರೆಯಿಂದ ನಿರ್ಮಾಣವಾಗಿದೆ. ಪ್ರಸ್ತರ ಕಪೋತಗಳಿದ್ದು ದ್ರಾವಿಡ ಶೈಲಿಯ ಮೂರು ಶಿಖರಗಳಿದ್ದು ಮೂರರಲ್ಲೂ ಕಳಶಗಳಿವೆ. ಊರಿನ ಒಳಗೆ ಪ್ರವೇಶಿಸಲು ಹೆಬ್ಬಾಗಿಲಿದ್ದು, ಅದು ಈಗ ಶಿಥಿಲವಾಗಿದೆ.

**೪.೨.೧೦ ಚನ್ನಕೇಶವ ದೇವಾಲಯ**

ಮತ್ತೊಂದು ಚನ್ನಕೇಶವ ದೇವಾಲಯವು ಬಾಣಾವರದಲ್ಲಿದೆ. ಈ ದೇವಾಲಯವು ಹೊಯ್ಸಳರ ಕಾಲದ್ದು, ಕ್ರಿ.ಶ. ೧೬–೧೭ನೇ ಶತಮಾನದ ಹೊತ್ತಿಗೆ ಬಾಣಾವರಪ್ಪ ಕಂಠೀರಾಯಪೇಟೆ ಎಂದು ಪ್ರಸಿದ್ಧವಾಗಿ ಬಾಣಾವರ ಸೀಮೆಯ ಆಡಳಿತ ಕೇಂದ್ರವಾಗಿ ಬೆಳೆಯಿತು.[೨೨] ಬಾಣವರ ಕ್ರಿ.ಶ. ೧೧೮೭ರ ಶಾಸನದಲ್ಲಿ ಮಾಚಿದೇವನೆಂಬ ಸಾತ್ವಿಕ ವಿಪ್ರನ ಮಗ ಮಾರಯ್ಯನು ಬ್ರಾಹ್ಮಣ್ಯವನ್ನು ತೊರೆದು ವಣಿಕ ಧರ್ಮವನ್ನು ಸ್ವೀಕರಿಸಿದ್ದುದನ್ನು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ಗರ್ಭಗೃಹದಲ್ಲಿ ಪದ್ಮಪೀಠದ ಮೇಲೆ ಚನ್ನಕೇಶವನ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ತನ್ನ ಕೈಗಳಲ್ಲಿ ಶಂಖ, ಚಕ್ರ, ಪದ್ಮ, ಗದಾ ಹಿಡಿದಿರುವನು ಬಾಗಿಲುವಾಡವು

ಅಲಂಕೃತವಾಗಿದೆ ಸುಖನಾಸಿ ದ್ವಾರದಲ್ಲಿ ದ್ವಾರಪಾಲಕರಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ನವರಂಗದ ಕಂಬಗಳು ವೃತ್ತಾಕಾರವಾಗಿ ಕೆಳಗೆ ಪೀಠ, ಪಾದ, ದಂಡವು ವೃತ್ತಾಕಾರವಾಗಿದೆ. ಘಟ ಫಲಕವಿದ್ದು ಬೋದಿಗೆಯು ಪದ್ಮಲಂಕೃತವಾಗಿದೆ, ಮುಖಮಂಟಪದ ಹನ್ನೆರಡು ಕಂಬಗಳು ಚೌಕಾಕಾರವಾಗಿದ್ದು, ದ್ವಾರದಲ್ಲಿ ದ್ವಾರಪಾಲಕರಿದ್ದು ಸರಳ ಶೈಲಿಯ ಅಧಿಷ್ಠಾನ ಭಿತ್ತಿಯಲ್ಲಿ ಯಾವುದೇ ಅಲಂಕಾರವಿಲ್ಲ ದ್ರಾವಿಡ ಶೈಲಿಯ ಶಿಖರವಿದ್ದು ಶಿಖರದಲ್ಲಿ ಚಿಕ್ಕ ಚಿಕ್ಕ ಕೋಷ್ಟಗುಡಿಗಳು ಖಾಲಿ ಇವೆ. ಮೇಲೆ ಲೋಹದ ಕಳಶವಿದೆ.

### ೪.೨.೧೧ ಲಕ್ಷ್ಮೀ– ನಾರಾಯಣ ದೇವಾಲಯ

ಹಿರಿಯೂರಿನಲ್ಲಿ ಈ ದೇವಾಲಯವು ಪಾಳೆಯಗಾರ ನಾಯಕರ ಕಾಲದಲ್ಲಿ ನಿರ್ಮಾಣವಾಗಿದ್ದು ಈಗ ಅದು ಸಂಪೂರ್ಣವಾಗಿ ಶಿಥಿಲಗೊಂಡಿದೆ. ದೇವಾಲಯವು ಪೂರ್ವಾಭಿಮುಖವಾಗಿದ್ದು ಗರ್ಭಗೃಹದಲ್ಲಿ ಲಕ್ಷ್ಮೀ ನಾರಾಯಣನ ಸುಂದರವಾದ ವಿಗ್ರಹವನ್ನು ಗರುಡ ಪೀಠದ ಮೇಲೆ ಪ್ರತಿಷ್ಠಾಪನೆ ಮಾಡಲಾಗಿದೆ. ನಾರಾಯಣನು ಲಕ್ಷ್ಮಿಯನ್ನು ಪಕ್ಕದಲ್ಲಿ ಕೂರಿಸಿಕೊಂಡಿದ್ದು ಕೈಯಲ್ಲಿ ಶಂಖ, ಚಕ್ರ ಹಿಡಿದಿದ್ದಾನೆ. ಕೀರ್ತಿ ಮುಖವು ಅಲಂಕೃತವಾಗಿದೆ. ಈ ದೇವಾಲಯದಲ್ಲಿ ಗರ್ಭಗೃ ಮಾತ್ರ ಇದೆ.

### ೪.೨.೧೨ ವೇಣುಗೋಪಾಲ ದೇವಾಲಯ

ಬೆಂಡೆಕೆರೆಯಲ್ಲಿ ಮತ್ತೊಂದು ವೇಣುಗೋಪಾಲನ ದೇವಾಲಯವು ಶಿಥಿಲಾವಸ್ಥೆಯಲ್ಲಿದೆ. ಬೆಂಡೆಕೆರೆ ಕ್ರಿ.ಶ. ೧೪೧೩ರ ಶಾಸನ ಈ ದೇವಾಲಯದಲ್ಲಿರುವ ಹಿರಣ್ಯಕಶ್ಯಪ ಸಂಹಾರ ಮೂರ್ತಿಯ ಉಬ್ಬುಶಿಲ್ಪವನ್ನು ಮಾದರನಾಯಕ ಮತ್ತು ಇತರರು ಮಾಡಿಸಿದ್ದರು ಎಂಬ ಉಲ್ಲೇಖವಿದೆ.[೨೩] ಕ್ರಿ.ಶ. ೧೨೩೨ರ ಶಾಸನದಲ್ಲಿ ಈ ದೇವಾಲಯಕ್ಕೆ ದಾಮೋದರಶೆಟ್ಟಿಯು ದಾನ ಕೊಟ್ಟಿರುವ ಬಗ್ಗೆ ಉಲ್ಲೇಖವಿದೆ ಅಲ್ಲದೇ ಜಯಗೊಂಡಪುರ ಎಂಬ ಹೆಸರನ್ನು ಉಲ್ಲೇಖಿಸಲಾಗಿದೆ.[೨೪]

ದೇವಾಲಯವು ಪೂರ್ವಾಭಿಮುಖವಾಗಿದ್ದು ಗರ್ಭಗೃಹದಲ್ಲಿ ಪದ್ಮಪೀಠದ ಮೇಲೆ ವೇಣುಗೋಪಾಲನ ಸುಂದರವಾದ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಕತ್ತರಿ ಕಾಲಿನಲ್ಲಿ ನಿಂತುಕೊಂಡು ಕೊಳಲನ್ನು ನುಡಿಸುತ್ತಿರುವನು. ಕಿರೀಟಧಾರಿಯಾಗಿ ವಸ್ತ್ರಾಭರಣಗಳಿಂದ ಅಲಂಕೃತನಾಗಿದ್ದಾನೆ. ಅಂತರಾಳದ ದ್ವಾರದ ಇಕ್ಕೆಲಗಳಲ್ಲಿ ಜಾಲಂದ್ರಗಳಿದ್ದು ಲಲಾಟಬಿಂಬದಲ್ಲಿ ಗಣೇಶನ ಶಿಲ್ಪವಿದೆ. ನವರಂಗದ ನಾಲ್ಕು ಕಂಬಗಳು ವೃತ್ತಾಕಾರವಾಗಿ ಘಟ, ಫಲಕ ಬೋದಿಗೆಯಿಂದ ಕೂಡಿವೆ. ನವರಂಗದ ಮಧ್ಯದ ಭುವನೇಶ್ವರವು ರೇಖಾಚಿತ್ರಗಳಿಂದ ಅಲಂಕೃತವಾಗಿದ್ದು ಉತ್ತರದ ಗೋಡೆಯಲ್ಲಿ ಹಿರಣ್ಯಕಶ್ಯಪುವಿನ ಸಂಹಾರದ ಉಬ್ಬುಶಿಲ್ಪವು ಅದ್ಭುತವಾಗಿದೆ.

ದೇವಾಲಯದ ಅಧಿಷ್ಠಾನವು ಮಣ್ಣಿನಲ್ಲಿ ಮುಚ್ಚಿ ಹೋಗಿದೆ. ಭಿತ್ತಿಯು ಶಿಥಿಲಾವಸ್ಥೆಯಲ್ಲಿದ್ದು ಶಿಖರವು ನಾಶವಾಗಿದೆ.

### ೪.೨.೧೩ ಲಕ್ಷ್ಮೀ– ನರಸಿಂಹ ದೇವಾಲಯ

ಈ ದೇವಾಲಯವು ಹೊಯ್ಸಳರ ಕಾಲದಲ್ಲಿ ಅರಕೆರೆ ಗ್ರಾಮದಲ್ಲಿ ನಿರ್ಮಾಣವಾಗಿದೆ ಅರಕೆರೆ ಕ್ರಿ.ಶ. ೧೨೩೩ರ ಶಾಸನದಲ್ಲಿ ೧ನೇ ನರಸಿಂಹನ ಕಾಲದಲ್ಲಿ ಈ ದೇವಾಲಯವು ನಿರ್ಮಾಣವಾಗಿದೆ ಎಂದು ಉಲ್ಲೇಖಿಸಲಾಗಿದೆ ಅಲ್ಲದೆ ಸರ್ವಜ್ಞಪುರ ಎಂಬ ಹೆಸರು ಶಾಸನದಲ್ಲಿ ಉಲ್ಲೇಖವಾಗಿದೆ.[೨೫] ಕ್ರಿ.ಶ. ೧೨೩೩ರ ಗಂಗರ ಕಾಲದ ಶಾಸನವೊಂದರಲ್ಲಿ ಸ್ಥಳೀಯ ಇತಿಹಾಸ ದಾಖಲಾಗಿದ್ದು ಕೇರಳ ಮೂಲದ ದಾಮೋದರ ಶೆಟ್ಟಿಯು ಈ ದೇವಾಲಯಕ್ಕೆ ದಾನ ಕೊಟ್ಟಿರುವ ಬಗ್ಗೆ ಉಲ್ಲೇಖವಿದೆ.

ಈ ದೇವಾಲಯವು ತ್ರಿಕೂಟಾಚಲವಾಗಿದ್ದು ಪೂರ್ವಾಭಿಮುಖವಾಗಿದೆ. ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಕಪ್ಪು ಶಿಲೆಯ ಕೇಶವನ ಸುಂದರವಾದ ವಿಗ್ರಹವಿದೆ. ತನ್ನ ಕೈಗಳಲ್ಲಿ ಶಂಖ, ಚಕ್ರ, ಅಭಯಹಸ್ತ, ಗದಾ ಹಿಡಿದಿರುವನು. ಅಂತರಾಳದ ದ್ವಾರದಲ್ಲಿ ದ್ವಾರಪಾಲಕರಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ನವರಂಗದಲ್ಲಿ ಒಂಬತ್ತು ಭುವನೇಶ್ವರಗಳಿದ್ದು ಒಂದಕ್ಕಿಂತ ಒಂದು ಭುವನೇಶ್ವರಗಳು ಸೂಕ್ಷ್ಮ ಕೆತ್ತನೆಗಳಿಂದ ಕೂಡಿವೆ. ಮಧ್ಯದ ನಾಲ್ಕು ಕಂಬಗಳು ವೃತ್ತಾಕಾರವಾಗಿದ್ದು ಕೆಳಗೆ ಪೀಠ, ಪಾದ, ಘಟ, ಫಲಕ, ಪುಷ್ಪಲಂಕೃತ ಬೋದಿಗೆಯಿದ ಕೂಡಿದೆ ನವರಂಗದಲ್ಲಿ ದಕ್ಷಿಣದ ಗರ್ಭಗೃಹದಲ್ಲಿ ಪೀಠದ ಮೇಲೆ ವೇಣುಗೋಪಾಲನ ವಿಗ್ರಹವು ಪ್ರತಿಷ್ಠಾಪನೆಯಾಗಿದೆ. ಉತ್ತರದ ಗರ್ಭಗೃಹದಲ್ಲಿ ಆಸೀನ (ಕುಳಿತಿರುವ) ಲಕ್ಷ್ಮೀ ನರಸಿಂಹನ ವಿಗ್ರಹವಿದೆ. ಪಕ್ಕದಲ್ಲಿ ಲಕ್ಷ್ಮೀಯನ್ನು ಕೂರಿಸಿಕೊಂಡಿರುವನು. ಮುಖಮಂಟಪದ ಛಾವಣಿಯು ಬಿದ್ದುಹೋಗಿದ್ದು ಏಳು ಕಂಬಗಳು ಮಾತ್ರ ವೃತ್ತಾಕಾರವಾಗಿ ಸರಳವಾಗಿವೆ. ಮುಖಮಂಟಪವನ್ನು ಪ್ರವೇಶಿಸಲು ಮೂರು ಸೋಪಾನಗಳಿವೆ.

ಅಧಿಷ್ಠಾನವು ಐದು ಅಡಿ ಎತ್ತರವಾಗಿದ್ದು ಪೀಠ, ಉಪಾನ, ಮಹಾಪದ್ಮ, ಘಳ, ಕಂಪ, ಕುಮುದ ಕಪೋತಗಳಿವೆ ಭಿತ್ತಿಯಲ್ಲಿ ಕುಡ್ಯಸ್ತಂಭಗಳಿದ್ದು ಸ್ತಂಭಗಳ ಮಧ್ಯದಲ್ಲಿ ದೇವತಾ ಮೂರ್ತಿಗಳಿವೆ. ದಾಮೋದರ, ನಾಟ್ಯ ಗಣಪತಿ, ಯೋಗಾನರಸಿಂಹ, ಜಡೆಯುಳ್ಳ ಭಂಜಿಕೆಯರು, ನಾಗದಾರಿಕೆ ಮೋಹಿನಿ, ಕಾಪಾಲಿಕ ಮೋಹಿನಿ, ವೇಣುಗೋಪಾಲ, ನಾಟ್ಯ ಸರಸ್ವತಿ, ರಾಮ ಲಕ್ಷ್ಮಣ, ಬಲರಾಮ, ವರಾಹ, ಪರಶುರಾಮ, ರುಂಡರಹಿತ, ಕಾಳಿಂಗಮರ್ದನೆ, ಗೋವರ್ಧನ ಗಿರಿಧರ, ಭಕ್ತರ ಶಿಲ್ಪ, ಮಧುಸೂದನ, ತ್ರಿವಿಕ್ರಮ, ಕೂರ್ಮ, ಬುದ್ಧ ಹೀಗೆ ದಶಾವತಾರದ ಶಿಲ್ಪಗಳಿವೆ ಮತ್ತು ಲಜ್ಜಾಗೌರಿಯ ಶಿಲ್ಪವು ಇದೆ. ಪ್ರಸ್ತರವು ಸ್ವಲ್ಪ ಮುಂಚಾಚಿದ್ದು ಶಿಖರವು ನಾಶವಾಗಿದೆ.

### ೪.೨.೧೪ ಕೇಶವ ದೇವಾಲಯ

ಹಾರನಹಳ್ಳಿಯ ಅರಸೀಕೆರೆಯಿಂದ ಹಾಸನಕ್ಕೆ ಹೋಗುವ ಮುಖ್ಯರಸ್ತೆಯಲ್ಲಿ ೫ ಕಿ.ಮೀ. ದೂರದಲ್ಲಿದೆ. ಈ ಗ್ರಾಮವನ್ನು ಬ್ರಾಹ್ಮಣರಿಗೆ ದತ್ತಿ ನೀಡಿದ್ದರಿಂದ ಹಾರುವನಹಳ್ಳಿ ಎಂದೂ ನಂತರ ಲಕ್ಷ್ಮೀನರಸಿಂಹಪುರವೆಂದೂ, ಹಿರಿಯ ಸೋಮನಾಥಪುರವೆಂದು ಹೀಗೆ ಕೆಲವು ರಾಜರ ಆಳ್ವಿಕೆಯಲ್ಲಿ

ಈ ಊರಿನ ಸ್ಥಳನಾಮ ಸಹ ಬದಲಾಗುತ್ತ ಈಗ ಹಾರನಹಳ್ಳಿ ಎಂದು ಪ್ರಚಲಿತದಲ್ಲಿದೆ. ಈ ಗ್ರಾಮದ ಜನತೆ ಕ್ರಿ.ಶ. ೧೨೩೪ರ ಶಾಸನದಲ್ಲಿ ಸಿಂದವಿ ಮಠದ ಸ್ವಾಮಿಗಳು ನೀಡಿದ ನಿವೇಶನದಲ್ಲಿ ಅವರ ಮಕ್ಕಳಾದ ಪೆದ್ದಣ ಹೆಗ್ಗಡೆ, ಕೇಶವಣ, ಸೋಮಣ ಎಂಬುವರು ಚನ್ನಕೇಶವ ದೇವಾಲಯ ಕಟ್ಟಲು ಕಾರಣೀಭೂತರಾದರೆಂದು ದೇವಾಲಯದ ಮುಂಭಾಗದ ಶಾಸನಗಳು ಉಲ್ಲೇಖಿಸಿವೆ. ಇಮ್ಮಡಿ ನರಸಿಂಹ ಬಲ್ಲಾಳನು ಈ ದೇವಾಲಯಕ್ಕೆ ದಾನಗಳನ್ನು ಮಾಡಿದನೆಂದು ಹೇಳಿದೆ.[೨೬]

ಈ ದೇವಾಲಯವು ವಿಶಾಲವಾದ ಆವರಣದಲ್ಲಿ ನಿರ್ಮಿತವಾಗಿದ್ದು ದೇವಾಲಯದ ಮುಂಭಾಗದಲ್ಲಿ ಮಹಾದ್ವಾರ ಬಾಗಿಲನ್ನು ಹೊಂದಿದೆ. ಈ ಆವರಣದ ಮಧ್ಯಭಾಗದಲ್ಲಿ ಎತ್ತರ ಜಗತಿಯ ನಕ್ಷತ್ರಾಕಾರ ವೇದಿಯಲ್ಲಿ ಶ್ರೀ ಚನ್ನಕೇಶವ ದೇವಾಲಯವನ್ನು ನಿರ್ಮಿಸಿದ್ದಾರೆ. ಈ ದೇವಾಲಯವು ತ್ರಿಕೂಟಾಚಲವಾಗಿದ್ದು, ಪೂರ್ವಾಭಿಮುಖವಾಗಿದೆ ಗರ್ಭಗೃಹದ ದ್ವಾರವು ಬಹಳ ಸುಂದರವಾಗಿದ್ದು ದ್ವಾರಬಂಧದ ಮೇಲೆ ನಾಟ್ಯ ಲಕ್ಷ್ಮಿಯ (ಷಡ್ಬುಜ) (ಪದ್ಮ ಅಂಕುಶ, ಸ್ವರ್ಗ ಹಸ್ತ, ಶಂಖ, ಲಂಬಹಸ್ತ, ಕಲಶ) ಶಿಲ್ಪವಿದೆ. ಗರ್ಭಗೃಹದಲ್ಲಿ ಗೋಪುರಗಳುಳ್ಳ ಮೂರು ಗೂಡುಗಳಿದ್ದು ಭುವನೇಶ್ವರದಲ್ಲಿ ಪದ್ಮವಿದೆ. ಗರುಡಪೀಠದ ಮೇಲೆ ಕೇಶವನ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಈ ವಿಗ್ರಹದ ಹಿಂದಿರುವ ಪ್ರಭಾವಳಿಯ ಮೇಲೆ ದಶಾವತಾರ ಕೆತ್ತನೆ, ಶ್ರೀದೇವಿ, ಭೂದೇವಿಯರ ಶಿಲ್ಪವೂ ಇದ್ದು ದ್ವಾರದಲ್ಲಿ ದ್ವಾರಪಾಲಕರಿದ್ದಾರೆ. ಸುಖನಾಸಿಯಲ್ಲಿ ಚನ್ನಕೇಶವ ಮತ್ತು ದೇವಿಯರ ಉತ್ಸವ ಮೂರ್ತಿ ಇಡಲಾಗಿದೆ. ದ್ವಾರದಲ್ಲಿ ಭದ್ರ-ಸುಭದ್ರರೆಂಬ ದ್ವಾರಪಾಲಕರು ಮತ್ತು ದ್ವಾರದ ಇಕ್ಕೆಲಗಳಲ್ಲಿ ಜಾಲಂದ್ರಗಳಿವೆ.

ನವರಂಗದಲ್ಲಿ ಹತ್ತು ಭುವನೇಶ್ವರಗಳಿದ್ದು, ಒಂದಕ್ಕಿಂತ ಒಂದು ಭುವನೇಶ್ವರದ ಕಲೆಯು ಸೂಕ್ಷ್ಮ ಕೆತ್ತನೆಗಳಿಂದ ಕೂಡಿದೆ. ಪೂರ್ವ ಭುವನೇಶ್ವರದಲ್ಲಿ ಕೃಷ್ಣ, ಕಾಳಿಂಗಮರ್ದನ, ವಿಷ್ಣುವಿನ ಅವತಾರಗಳಿದ್ದು ಮಧ್ಯದ ಕರ್ಣಿಕೆಯಲ್ಲಿ ಕಾಳಿಂಗಮರ್ದನನ ಶಿಲ್ಪವಿದೆ. ಮಿಕ್ಕ ಭುವನೇಶ್ವರಗಳಲ್ಲಿ ರೇಖಾಚಿತ್ರಗಳು ಮತ್ತು ಭುವನೇಶ್ವರಿಯ ಕರ್ಣಿಕೆಯಲ್ಲಿ ಸ್ಥಾನಕ ವಿಷ್ಣುವಿನ ವಿಗ್ರಹವಿದೆ. ಕೀರ್ತಿ ಮುಖಗಳು, ಪದ್ಮದ ಮೊಗ್ಗಿನಲ್ಲಿಯೂ ಅತಿ ಸೂಕ್ಷ್ಮವಾದ ಕೆತ್ತನೆಗಳಿವೆ. ಪೂರ್ವದಲ್ಲಿ ಹೆಚ್ಚುವರಿ ಜಾಗವಿದ್ದು ಗೋಡೆಯ ಹತ್ತಿರ ಕಕ್ಷಾಸನವಿದ್ದು ಹಿಂದೆ ಜಾಲಂದ್ರಗಳಿವೆ. ನಕ್ಷತ್ರಾಕಾರದ ಆರು ಕಂಬಗಳು ಮುಂಭಾಗದಲ್ಲಿದ್ದು ಮಧ್ಯದಲ್ಲಿರುವ ನಾಲ್ಕು ಕಂಬಗಳು ದುಂಡಾಗಿವೆ. ನಕ್ಷತ್ರಾಕಾರದ ಆರು ಕಂಬಗಳಲ್ಲಿ ಅರವತ್ತುನಾಲ್ಕು ಕೋನಗಳಿವೆ. ಪೂರ್ವದ ಎರಡು ಕಂಬಗಳಲ್ಲಿ ನಕ್ಷತ್ರಕೋನಗಳ ಮಧ್ಯದಲ್ಲಿ ನಾಟ್ಯ ಶಿಲ್ಪಗಳು, ಕೀರ್ತಿ ಮುಖಗಳ ಕೆತ್ತನೆ ಬಹಳ ಸುಂದರವಾಗಿದೆ. ನವರಂಗದಲ್ಲಿ ಪಶ್ಚಿಮ ಭಾಗದಲ್ಲಿ ಪೂರ್ವಾಭಿಮುಖವಾಗಿ ನಾಲ್ಕು ಗೂಡುಗಳಿದ್ದು ಇವುಗಳನ್ನು ಚಿಕ್ಕ ದೇವಾಲದಯ ಹಾಗೆ ಗೋಪುರ ಮಾದರಿಯಲ್ಲಿ ನಿರ್ಮಿಸಿ, ಈ ಗೂಡುಗಳಲ್ಲಿ ಆಸೀನ ಸರಸ್ವತಿ (ಅಕ್ಷಮಾಲ, ಅಂಕುಶ, ಪಾಶಿಪುಸ್ತಕ) ಗಣೇಶ, ಶ್ರೀದೇವಿ, ಭೂದೇವಿ (ಪದ್ಮ, ಶಂಖ, ಚಕ್ರ, ಫಲ), ಪೀಠದಲ್ಲಿ ಕೂರ್ಮ ಆದಿಶೇಷವಿದೆ ಲಕ್ಷ್ಮಿ (ಅಭಯ ಶಂಖ, ಚಕ್ರ, ಕಳಶ) ಪೀಠದಲ್ಲಿ ಗಜವಿದೆ ಹಾಗೆ ಉತ್ತರ ಭಾಗದಲ್ಲಿ ಆಳ್ವಾರರ ವಿಗ್ರಹಗಳನ್ನು ಸಹ ಪ್ರತಿಷ್ಠಾಪಿಸಲಾಗಿದೆ.

ದಕ್ಷಿಣದ ಗರ್ಭಗೃಹದಲ್ಲಿ ಗರುಡಪೀಠದ ಮೇಲೆ ವೇಣುಗೋಪಾಲನ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಆ ವಿಗ್ರಹದ ಪ್ರಭಾವಳಿಯ ಮೇಲೆ ದಶಾವತಾರ ಕೆತ್ತನೆ, ಗೋಪಾಲಕರಿದ್ದು ಗರ್ಭಗೃಹದ ಭುವನೇಶ್ವರದಲ್ಲಿ ಗೋಪಾಲಕೃಷ್ಣ ವಿಗ್ರಹ, ಅಷ್ಟದಿಕ್ಪಾಲಕ ಶಿಲ್ಪಗಳು ಬಹಳ ಸುಂದರವಾಗಿದ್ದು ಪಕ್ಕದಲ್ಲಿ ದೇವಿಯರಿದ್ದಾರೆ.

ಉತ್ತರದ ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಲಕ್ಷ್ಮಿ ನರಸಿಂಹನ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಗರ್ಭಗೃಹದ ದ್ವಾರದ ಮೇಲೆ ಪ್ರಹ್ಲಾದ ಮತ್ತು ಗರುಡನ ನಡುವೆ ಆಸೀನ ಲಕ್ಷ್ಮೀ ನರಸಿಂಹ, ಪರಿವಾರದವರ ಸೂಕ್ಷ್ಮ ಕೆತ್ತನೆಯ ಶಿಲ್ಪವಿದೆ. ಇದರ ಮೇಲ್ಭಾಗದ ಲತಾ ತೋರಣದಲ್ಲಿ ದಶಾವತಾರ ರೂಪಗಳಿವೆ. ಭುವನೇಶ್ವರದಲ್ಲಿ ಯೋಗಾನರಸಿಂಹನ ಕೆತ್ತನೆ ಕೆಲಸ ನಯನ ಮನೋಹರವಾಗಿದೆ.[೨೭]

ಅಧಿಷ್ಠಾನದಲ್ಲಿ ನಾಲ್ಕು ಅಡಿ ಎತ್ತರದ ಜಗತಿಯು ನಕ್ಷತ್ರಾಕಾರವಾಗಿದ್ದು ಉತ್ತರ, ದಕ್ಷಿಣ, ಪೂರ್ವಗಳಲ್ಲಿ ಮೆಟ್ಟಿಲುಗಳಿವೆ. ಈ ಮೆಟ್ಟಿಲುಗಳ ಪಕ್ಕದಲ್ಲಿ ಬೇಲೂರು ಹಳೇಬೀಡುಗಳಲ್ಲಿದ್ದಂತೆಯೇ ಗೋಪುರಗಳಿವೆ. ನವರಂಗ ದ್ವಾರದ ಎರಡು ಕಡೆಯಲ್ಲೂ ಗೋಪುರಗಳಿವೆ. ಹೀಗೆ ಸುತ್ತಲೂ ಒಟ್ಟೂ ಎಂಟು ಗೋಪುರಗಳಿವೆ. ಈ ಗೋಪುರಗಳ ಕೆಳಗಿನ ಗೋಡೆಗಳಲ್ಲಿ ವಿಗ್ರಹಗಳಿವೆ. ಜಗತಿಯ ಮೇಲಿನ ಭಿತ್ತಿಯ ಕೆಳಭಾಗದಲ್ಲಿ ನಾಲ್ಕುವರೆ ಅಡಿಗಳವರೆಗೆ ಆರು ಚಿತ್ರಪಟ್ಟಿಕೆಗಳಿವೆ. ಎಲ್ಲಾ ಪಟ್ಟಿಗಳಲ್ಲೂ ಕೆತ್ತನೆ ಕೆಲಸ ಆಗಿಲ್ಲ. ಮೊದಲನೆ ಸಾಲು ಗಜಗಳ ಸಾಲು ಇದು ಶಕ್ತಿಯ ಸಂಕೇತವಾಗಿದ್ದು ಎರಡನೇ ಸಾಲಿನಲ್ಲಿ ಅಶ್ವದಗಳಗಳ ಸಾಲುಗಳಿವೆ ಇದು ಚಲನವಲನದ ಸಂಕೇತ. ೩ನೇ ಸಾಲಿನಲ್ಲಿ ಲತಾಪಟ್ಟಿಕೆಯ ಮಧ್ಯ ಪಕ್ಷಿಗಳು, ಪ್ರಾಣಿಗಳ ಸಾಲು, ೪ನೇ ಸಾಲಿನಲ್ಲಿ ಪೌರಾಣಿಕ ಕಥೆಗಳ ಸಾಲು ಖಾಲಿಯಿದೆ. ಐದು ಮತ್ತು ಆರನೇ ಸಾಲಿನಲ್ಲಿ ಮಕರಗಳು ಮತ್ತು ಹಂಸಗಳ ಸಾಲುಗಳಿದ್ದು ಪಾವಿತ್ರ್ಯ ಮತ್ತು ಶಾಂತಿಯ ಸಂಕೇತವಾಗಿದೆ. ಇದರ ಮೇಲ್ಭಾಗವಾದ ಭಿತ್ತಿಯನ್ನು ಎರಡು ಭಾಗ ಮಾಡಿ ಕೆಳಗಿನ ಭಾಗದಲ್ಲಿ ದೇವಾಲಯ ಪ್ರಕಾರ ಪಥದಲ್ಲಿ ಶಿಲ್ಪಕೋಷ್ಟಕಗಳಿದ್ದು ಇವುಗಳಲ್ಲಿ ವರಾಹಮೂರ್ತಿ, ದಕ್ಷಿಣಮೂರ್ತಿ, ವಿಷ್ಣುವಿನ ಇಪ್ಪತ್ನಾಲ್ಕು ರೂಪಗಳು (ಚತುರ್‌ವಿಂಶತಿ ವಿಷ್ಣು), ಲಕ್ಷ್ಮಿ, ಭೈರವ, ಪಾಂಡುರಂಗ (ದ್ವಿಭುಜ, ಶಂಖ, ಕಳಶ), ಕೋದಂಡರಾಮ, ಬ್ರಹ್ಮ, ನೃತ್ಯ ಸರಸ್ವತಿ, ಅರ್ಜುನ ಮತ್ಸ್ಯಯಂತ್ರ ಭೇದಿಸುತ್ತಿರುವುದು, ಲಕ್ಷ್ಮೀ ನಾರಾಯಣ ಶಿಲ್ಪಗಳು, ಹನುಮಂತ, ಹಿರಣ್ಯಾಕ್ಷ, ಗರುಡ, ಆಸೀನ ಲಕ್ಷ್ಮೀ ನಾರಾಯಣ (ಇದರ ವಸ್ತ್ರದ ಅಂಚು ಗಮನಾರ್ಹವಾಗಿದೆ) ಇವುಗಳ ಕೆಳಗಡೆ ಪೆರಿಯಂಡ ಹೆಗ್ಗಡೆ ಹೆಸರಿದೆ. ಮಹಿಷಮರ್ದಿನಿ ನಿಂತಿರುವ ನರಸಿಂಹ, ಯೋಗಾನರಸಿಂಹ, ಗೋವರ್ಧನಧಾರಿ, ಬಲಮುರಿ ಗಣಪತಿ, ಉಗ್ರನರಸಿಂಹ, ಬಲಿ, ಚಾಮರಧಾರಿಣಿ ಇಬ್ಬರು ದೇವಿಯುರು ಷಡ್ಭುಜ ನೃತ್ಯಕೇಶವ (ಪದ್ಮ, ಗಜಹಸ್ತ, ಶಂಖ, ಸ್ವರ್ಗಹಸ್ತ, ಚಕ್ರ, ಗದಾ), ಮೋಹಿನಿ ಸರ್ಪ, ರತಿ ಮನ್ಮಥ ಶಿಲ್ಪಗಳು ಅತ್ಯಾಕರ್ಷಕವಾಗಿವೆ. ಇವುಗಳ ಮೇಲ್ಭಾಗದಲ್ಲಿ ಸಣ್ಣ–ಸಣ್ಣ ಗೋಪುರಗಳ ಕೆತ್ತನೆಯಿಂದ ಕೂಡಿದ್ದು ಇವುಗಳ ಪೀಠದಲ್ಲಿ ಕೀರ್ತಿ ಮುಖಗಳು ಮೇಲೆ ಲತಾ ತೋರಣಗಳು ಇವೆ. ಉತ್ತರದ ವಿಗ್ರಹಗಳ ಕೆಳಗೆ ಮಲ್ಲಿತಮ್ಮನ ಹೆಸರಿದ್ದು ಈ

೫ನೇ ಈ ದೇವಾಲಯದ ಮುಖ್ಯ ಶಿಲ್ಪಿಯೂ ಆಗಿದ್ದಾನೆ. ದೇವಾಲಯ ದಕ್ಷಿಣ, ಉತ್ತರ, ಪಶ್ಚಿಮ ಭಾಗದಲ್ಲಿ ದೇವಾಲಯಕ್ಕೆ ಹೊಂದಿಕೊಂಡಂತೆ ದೊಡ್ಡ ಚಿಕ್ಕ ಗೂಡುಗಳನ್ನು ನಿರ್ಮಿಸಿದ್ದಾರೆ. ಆ ಗೂಡುಗಳೂ ಸಹ ನಕ್ಷತ್ರಾಕಾರವಾಗಿ ದೇವಾಲಯ ಗೋಪುರ ಮಾದರಿಯಲ್ಲಿ ಗೂಡುಗಳು ಇದ್ದು, ಇದರ ಮೇಲ್ಭಾಗದಲ್ಲಿ ವಿಮಾನ ಗೋಪುರವಿದ್ದು ವಿಮಾನ ಗೋಪುರದ ಕೆಳಬಂದಿಕೆಯಲ್ಲಿ ದಕ್ಷಿಣ ಭಾಗದಲ್ಲಿ ಯೋಗಾನರಸಿಂಹ ಪಶ್ಚಿಮ ಭಾಗದಲ್ಲಿ ಲಕ್ಷ್ಮೀ ನಾರಾಯಣ ಉತ್ತರ ಭಾಗದಲ್ಲಿ ವರಾಹ ಮೂರ್ತಿಗಳು ಹಾಗೆ ಪೂರ್ವ ಭಾಗದಲ್ಲಿ ವೇಣುಗೋಪಾಲನ ವಿಗ್ರಹವನ್ನು ಕೆತ್ತಲಾಗಿದೆ. ಮೇಲ್ಛಾವಣಿಯ ಕೆಳಭಾಗದಲ್ಲಿ ಮರಗೆಲಸದಂತೆ ತೊಲೆಗಳಿವೆ. ಕೈಪಿಡಿ ಗೋಡೆಗಳ ಮೇಲೆ ಶಿಖರಗಳಿವೆ. ಈ ಶಿಖರವು ನಾಲ್ಕಂತಸ್ತಿನಲ್ಲಿದ್ದು ನಕ್ಷಾತ್ರಾಕಾರವಾಗಿರುವುದರಿಂದ ಹೆಚ್ಚು ಅಲಂಕಾರಗಳಿಲ್ಲದಿದ್ದರೂ ಸುಂದರವಾಗಿದೆ. ಸುಖನಾಸಿ ಮೇಲೆ ಚಾಚಿರುವ ಭಾಗದಲ್ಲಿ ಸಳನ ವಿಗ್ರಹವಿಲ್ಲ. ಸ್ತೂಪಿಯ ಮೇಲೆ ಲೋಹದ ಕಳಶವಿದೆ.

### ೪.೩ ಜೈನ ದೇವಾಲಯಗಳು

ಅಹಿಂಸೆ, ಸತ್ಯ, ಅಸ್ಥೇಯ ಬ್ರಹ್ಮಚರ್ಯ ಮೊದಲಾದ ಸಾತ್ವಿಕ ಆದರ್ಶ ಗುಣಗಳಿಗೆ ಪ್ರಾಧಾನ್ಯತೆ ನೀಡಿದ ಜೈನಧರ್ಮವು ವಿಶ್ವದ ಅತ್ಯಂತ ಪ್ರಾಚೀನ ಧರ್ಮಗಳಲ್ಲೊಂದಾಗಿದ್ದು, ಕರ್ನಾಟಕದ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಜೈನರು ತಮ್ಮ ದೇವಾಲಯಗಳನ್ನು ಬಸದಿ ಅಥವಾ ಜಿನಾಲಯ ಎನ್ನುತ್ತಾರೆ. ಇವರು ಬೌದ್ಧರು ಹಾಗೂ ಮಹಮ್ಮದೀಯರಂತೆ ತಮ್ಮದೇ ಆದ ಪ್ರತ್ಯೇಕ ದೇವಾಲಯ ನಿರ್ಮಾಣ ಶೈಲಿಯನ್ನೇನು ಪ್ರಾರಂಭಿಸಲಿಲ್ಲ. ಆಯಾ ಪ್ರದೇಶದ ದೇವಾಲಯಗಳ ವಾಸ್ತುಶೈಲಿಯನ್ನೇ ಇವರು ಅನುಸರಿಸಿದರು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಹೊಯ್ಸಳ ಆಳ್ವಿಕೆಯ ಕಾಲಾವಧಿಯಲ್ಲಿ ಜೈನ ಧರ್ಮವೂ ಒಂದು ಪ್ರಮುಖ ಧರ್ಮವಾಗಿ ಅಸ್ತಿತ್ವದಲ್ಲಿತ್ತು. ಈ ಅವಧಿಯಲ್ಲಿ ಹಲವು ಬಸದಿಗಳು ನಿರ್ಮಾಣಗೊಂಡವು.

### ೪.೩.೧ ಸಹಸ್ರ ಕೂಟ ಬಸದಿ

ನಗರದ ಮಧ್ಯದಲ್ಲಿ ಸಹಸ್ರಕೂಟ ಬಸದಿಯು ಹೊಯ್ಸಳ ಕಾಲಾವಧಿಯಲ್ಲಿ ನಿರ್ಮಾಣವಾಗಿದೆ. ಇದು ೧೩ನೇ ಶತಮಾನದಲ್ಲಿ ಏಕ್ಕೋಟಿ ಜಿನಾಲಯವಾಗಿದ್ದು, ಇಂದಿಗೂ ಉಳಿದುಕೊಂಡ ಬಂದು ಪೂಜಾದಿಗಳು ನಡೆಯುತ್ತಿವೆ. ಇಮ್ಮಡಿ ವೀರ ಬಲ್ಲಾಳನ ದಂಡನಾಯಕ ರೇಚರಸನು ತನ್ನ ಮಡದಿ ಗೌರಾದೇವಿಯ ನೆನಪಿಗಾಗಿ ಅರಸೀಕೆರೆಯಲ್ಲಿ ಸಹಸ್ರಕೂಟ ಬಸದಿ ಕಟ್ಟಿಸಿದ ಎಂಬ ಉಲ್ಲೇಖವು ಕ್ರಿ.ಶ. ೧೨೨೦ರ ಶಾಸನದಲ್ಲಿದೆ ಮತ್ತು ವೀರ ಬಲ್ಲಾಳನು ಈ ಬಸದಿಗೆ ಧಾರಾಪೂರ್ವಕವಾಗಿ ದಾನ ನೀಡಿದ್ದಾನೆ. ಅವನ ಮಗಳು ರಾಜಕುಮಾರಿ ಸೋಮಲಾದೇವಿ ಜಿನಾಲಯಕ್ಕೆ ಭೂದಾನ ಮಾಡಿದ್ದಾಳೆ ಮತ್ತು ಅನೇಕರು ಗದ್ಯಾಣ, ಹೊನ್ನು, ಶಾಂತಿನಾಥ, ತೀರ್ಥಂಕರ ಪ್ರತಿಮೆಗೆ ಕಲ್ಲನ್ನು ದಾನಕೊಟ್ಟಿದ್ದಾರೆ.[೨೮]

ದೇವಾಲಯವು ಪಶ್ಚಿಮಾಭಿಮುಖವಾಗಿದ್ದು ಗರ್ಭಗೃಹದ ಮಧ್ಯದಲ್ಲಿ ಸಹಸ್ರ ಕೂಟ ಜಿನಬಿಂಬವನ್ನು ಪ್ರತಿಷ್ಠಾಪಿಸಿರುವುದರಿಂದ ಈ ಬಿಂಬದ ಸುತ್ತ ನಾಲ್ಕು ಚೌಕಾಕಾರದ ಕಂಬಗಳಿವೆ. ಇದರಿಂದ ಗರ್ಭಗೃಹದ ಒಳಗೆ ಮಂಟಪವೊಂದನ್ನು ರೂಪಿಸಿರುವಂತೆ ತೋರುತ್ತದೆ. ಮತ್ತು ಗರ್ಭಗೃಹದ ಒಳಭಿತ್ತಿಯಲ್ಲಿ ಮಾತ್ರ ಎರಡು ದೇವಕೋಷ್ಠಕಗಳಿದ್ದು ಜಿನಬಿಂಬದ ಸುತ್ತಲೂ ೧೦೮ ಮಹಾವೀರನ ಚಿಕ್ಕ ಚಿಕ್ಕ ಮೂರ್ತಿಶಿಲ್ಪಗಳಿವೆ. ಪೀಠಭಾಗದಲ್ಲಿ ಸುತ್ತಲೂ ೨೪ ತೀರ್ಥಂಕರಿದ್ದಾರೆ. ತೆರೆದ ಅಂತರಾಳದಲ್ಲಿ ಎರಡು ಕಂಡಿಗಳಿವೆ. ನವರಂಗದಲ್ಲಿ ಒಂಬತ್ತು ಭುವನೇಶ್ವರಗಳಿದ್ದು ಅವುಗಳಲ್ಲಿ ತೀರ್ಥಂಕರರು ವಾದ್ಯಗಾರರು, ನೃತ್ಯ ಮಾಡುವವರು ಹಾಗೂ ಹೂಬಳ್ಳಿಗಳಿಂದ ಅಲಂಕೃತವಾಗಿವೆ. ಪ್ರತಿಯೊಂದು ಭುವನೇಶ್ವರದಲ್ಲಿ ಪದ್ಮವು ಬೇರೆ ಬೇರೆ ರೀತಿಯಲ್ಲಿದೆ. ನವರಂಗದ ಮಧ್ಯದಲ್ಲಿ ನಾಲ್ಕು ಕಂಬಗಳು ವೃತ್ತಾಕಾರವಾಗಿದ್ದು ಸುತ್ತಲೂ ಹನ್ನೆರಡು ಅರೆಗಂಬಗಳಿವೆ ಕಂಬಗಳು ಗೋಡೆಯಲ್ಲಿ ಸೇರಿಕೊಂಡಿವೆ. ಮುಖ ಮಂಟಪದಲ್ಲಿ ನಾಲ್ಕು ಕಂಬಗಳು ಚೌಕಾಕಾರವಾಗಿ ಸರಳವಾಗಿದ್ದು ಮುಖಮಂಟಪವನ್ನು ಮೂರು ಸೋಪಾನಗಳಿವೆ.

ಅಧಿಷ್ಠಾನವು ನಾಲ್ಕು ಅಡಿ ಎತ್ತರವಾಗಿದ್ದು ಪೀಠ, ಉಪಾನ, ಘಳ, ಕುಮುದ, ಕಪೋತಗಳಿವೆ ಭಿತ್ತಿಯಲ್ಲಿ ಕುಡ್ಯ ಸ್ತಂಭಗಳು ಮಾತ್ರ ಕಂಡುಬರುತ್ತವೆ. ಪ್ರಸ್ತರವು ಮುಂಚಾಚಿದೆ. ಈ ದೇವಾಲಯಕ್ಕೆ ಇದಕ್ಕೆ ಶಿಖರವಿಲ್ಲ. ದೇವಾಲಯದ ಸುತ್ತಲೂ ಪ್ರಾಕಾರ ಗೋಡೆ ಇದ್ದು ದೇವಾಲಯದ ಮುಂದೆ ಕೇಶವನ, ಮಹಾವೀರನ ವಿಗ್ರಹಗಳಿದ್ದು ಶಾಸನಗಳು ಅಲ್ಲದೆ ಬಲಿ ಪೀಠಗಳ ಅವಶೇಷಗಳಿವೆ.

### ೪.೪ ಶಾಕ್ತ ದೇವಾಲಯಗಳು

ಇಂದು ಭಾರತದಲ್ಲೆಲ್ಲ ಹಿಂದೂಗಳಲ್ಲಿ ಶಾಕ್ತ ಸಂಪ್ರದಾಯ ಒಂದು ವಿಶಿಷ್ಟ ಆಚರಣೆಯಾಗಿದೆ. ಮಾತೃ ಸ್ವರೂಪಳಾದ ಸ್ತ್ರೀ ದೇವತೆಯು ನಾನಾ ಸ್ವರೂಪದಲ್ಲಿ ಆರಾಧಿಸಲ್ಪಡುವುದಲ್ಲದೆ ದೇಶದ ಬೇರೆ-ಬೇರೆ ಭಾಗಗಲ್ಲಿ ಅಸಂಖ್ಯಾತ ದೇಗುಲಗಳನ್ನು ನಿರ್ಮಿಸಿರುವುದು ಸುವಿಧಿತ. ಅಲ್ಲದೆ ಗ್ರಾಮೀಣ ಮಟ್ಟದಿಂದ ಹಿಡಿದು ನಗರ ಮಟ್ಟದವರೆಗೂ ಗ್ರಾಮದೇವತೆಗಳ ಶಕ್ತಿದೇವತೆಗಳ ಆರಾಧನೆಯನ್ನು ಕಾಣಬಹುದು.[೨೯]

### ೪.೪.೧ ಗಂಗಾಮಾಳಿಕಾದೇವಿ ದೇವಾಲಯ

ಅರಸೀಕೆರೆಯಿಂದ ೭ ಕಿ.ಮೀ. ದೂರದ ಅಮ್ಮನಹಟ್ಟಿ ಎಂಬ ಗ್ರಾಮದಲ್ಲಿ ಈ ದೇವಾಲಯವಿದೆ. ಗಂಗಾಮಾಳಿಕಾದೇವಿಯು ಶೇಷಪ್ಪನ ಹಳ್ಳಿಯಿಂದ ಬಂದು ಈ ಊರಿನಲ್ಲಿ ನೆಲೆಸಿರುವುದರಿಂದ ಅಮ್ಮನ ಹಟ್ಟಿ ಎಂದು ಐತಿಹ್ಯವಿದೆ. ಈ ದೇವಿಯು ಗೊಲ್ಲರ ಸಮುದಾಯದ ಮಾತ್ರ ಪೂಜಾರಿಕೆಗೆ ಸೀಮಿತವಾಗಿದ್ದು, ವಿವಿಧ ಕಟ್ಟುಪಾಡುಗಳ ಆಚರಣೆಯಿಂದ ಕೂಡಿದೆ.

ದೇವಾಲಯವು ಪೂರ್ವಾಭಿಮುಖವಾಗಿದ್ದು ಗರ್ಭಗೃಹದ ಒಳಗಡೆ ಬಿದುರಿನಿಂದ ಹೆಣೆದಿರುವ ಗುಬ್ಬಗೊಳಗೆ ಗಂಗಾಮಾಳಿಕಾ ದೇವಿಯ ವಿಗ್ರಹವನ್ನು ಇಟ್ಟಿದ್ದಾರೆ. ಗುಬ್ಬಕ್ಕೆ ಕಿರಿದಾದ ದ್ವಾರವಿದ್ದು ಈ ದ್ವಾರವು ಬಳ್ಳಿಯಿಂದ ಅಲಂಕೃತವಾಗಿದೆ. ವಿಶೇಷವೆಂದರೆ ಅಮ್ಮನವರಿಗೆ ಮೂಗುತಿಯನ್ನು ಇಡುವುದಿಲ್ಲ. ನವರಂಗದಲ್ಲಿ ನಾಲ್ಕು ಚೌಕಾಕಾರದ ಕಂಬಗಳಿದ್ದು ಕೆಳಗೆ ಪಾದ, ಘಟ, ಫಲಕ, ಪುಷ್ಪ ಬೋದಿಗೆಯಿಂದ ಕೂಡಿದೆ ಮುಖಮಟಪದಲ್ಲಿ ಎಂಟು ಕಂಬಗಳಿದ್ದು ದ್ವಾರದಲ್ಲಿ ದ್ವಾರಪಾಲಕರಿದ್ದಾರೆ. ಅಧಿಷ್ಠಾನ ಭಿತ್ತಿಯು ಸರಳವಾಗಿದೆ. ಪ್ರಸ್ತರದ ಮೇಲ್ಭಾವಣಿಯ ಕೋಷ್ಠದಲ್ಲಿ ದುರ್ಗೆಯು ಸಿಂಹದ ಮೇಲೆ ಕುಳಿತಿರುವಳು. ತನ್ನ ಕೈಗಳಲ್ಲಿ ಖಡ್ಗ, ಪದ್ಮ, ಅಭಯ, ವರದ ಹಸ್ತಗಳಿದ್ದು ಕೀರ್ತಿಮುಖದಿಂದ ಕೂಡಿದೆ. ಕೋಷ್ಠಕದ ಮೇಲೆ ಕಳಶಗಳಿವೆ. ಶಿಖರವು ಆಧುನಿಕವಾಗಿದ್ದು ದ್ರಾವಿಡ ಶೈಲಿಯಲ್ಲಿದೆ. ಸ್ತೂಪಿಯಮೇಲೆ ಲೋಹದ ಕಳಶವಿದ್ದು ದೇವಾಲಯದ ಸುತ್ತಲೂ ಪ್ರಾಕಾರ ಗೋಡೆ ಇದೆ.

### ೪.೪.೨ ಸಪ್ತ ಮಾತೃಕೆಯರ ದೇವಾಲಯ

ಈ ದೇವಾಲಯವು ಹೆಗ್ಗಟ ಎಂಬ ಗ್ರಾಮದಿಂದ ಹೊರಗಿದೆ. ಗರ್ಭಗೃಹದಲ್ಲಿ ಸಪ್ತಮಾತೃಕೆಯರಾದ ಬ್ರಾಹ್ಮಣೀ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡಿ ಶಕ್ತಿ ದೇವತೆಗಳ ಕಪ್ಪು ಶಿಲೆಯ ವಿಗ್ರಹಗಳಿವೆ. ಈ ವಿಗ್ರಹಗಳು ಒಂದರ ಪಕ್ಕ ಒಂದರಂತೆ ಸಾಲಾಗಿವೆ. ನವರಂಗದಲ್ಲಿ ನಾಲ್ಕು ಕಂಬಗಳು ವೃತ್ತಾಕಾರವಾಗಿದೆ. ಮುಖಮಂಪಟದ ನಾಲ್ಕು ಕಂಬಗಳು ಚೌಕಾಕಾರವಾಗಿದ್ದು ದೇವಾಲಯದ ಮುಂದೆ ಜೋಡಿ ಪಾದುಕೆಗಳಿವೆ. ಭಿತ್ತಿಯು ಸರಳವಾಗಿದ್ದು ಪ್ರಸ್ತರವು ಸ್ವಲ್ಪ ಮುಂಚಾಚಿದೆ ಕಟ್ಟಡದ ಮೇಲ್ಭಾವಣಿಯ ಕೋಷ್ಠಕದಲ್ಲಿ ಸಪ್ತಮಾತೃಕೆಯರ ಮೂರ್ತಿ ಶಿಲ್ಪಗಳಿವೆ. ಶಿಖರವು ಆಧುನಿಕವಾಗಿದ್ದು ಸ್ತೂಪಿಯಲ್ಲಿ ಕಳಶವಿದೆ.

ದೇವಾಲಯದ ಸುತ್ತಲೂ ಪ್ರಾಕಾರ ಗೋಡೆಯನ್ನೊಳಗೊಂಡ ದ್ವಾರ ಬಾಗಿಲಿದ್ದು ಅದರ ಮೇಲೆ ಚಿಕ್ಕದಾದ ಗೋಪುರವಿದೆ.

### ೪.೫ ಮೂರ್ತಿ ಶಿಲ್ಪಗಳು

ಭಾರತದಲ್ಲಿ ದೇವತಾರಾಧನೆ ಮತ್ತು ದೇವಾಲಯಗಳ ನಿರ್ಮಾಣ ಎಂದು ಆರಂಭವಾಯಿತೋ ಅಂದಿನಿಂದಲೇ ದೇವತಾ ಮೂರ್ತಿಗಳ ಪ್ರತಿಷ್ಠಾಪನೆ ಮತ್ತು ಆರಾಧನೆ ನಡೆಯುತ್ತಾ ಬಂದಿರುವುದು ತಿಳಿದ ಸಂಗತಿ ಯಾವುದೇ ಮತದ ಮಂಥಗಳ ದೇವಾಲಯವನ್ನು ಅವಲೋಕಿಸಿದರೆ ಆ ದೇವಾಲಯಕ್ಕೊಂದು ಸಾಂಕೇತಿಕ ದೇವತಾ ಮೂರ್ತಿ ಅಥವಾ ಶಿಲ್ಪಗಳನ್ನು ಕುರಿತು ಶಾಸ್ತ್ರೀಯ ಅಧ್ಯಯನವೇ ಶಿಲ್ಪಶಾಸ್ತ್ರವಾಗಿದೆ.

ಶಿಲ್ಪ ಎನ್ನುವ ಮಾತು ಮೊದಲು ಬಹಳ ವ್ಯಾಪಕವಾದ ಅರ್ಥವನ್ನು ಪಡೆದಿತ್ತು. ಪ್ರಸಿದ್ಧವಾದ ಅರವತ್ನಾಲ್ಕು ಕಲೆಗಳಿಗೆಲ್ಲಾ ಶಿಲ್ಪ ಎನ್ನುವ ಹೆಸರೇ ಅನ್ವಯವಾಗುತ್ತಿತ್ತು. ಮುಂದೆ ಈ ಪದದ ವ್ಯಾಪ್ತಿ

ಪರಿಮಿತಿಗೊಂಡು ಶಿಲ್ಪ ಎಂದರೆ ಮೂರ್ತಿಗಳು ಎಂಬ ಅರ್ಥಕ್ಕೆ ಸೀಮಿತವಾಗಿತ್ತು.[೩೦] ಜಗತ್ ಸೃಷ್ಟಿಯು ಯಾವಾಗ ಆಯಿತೋ ಆಗಲೇ ಶಿಲ್ಪವೂ ಪ್ರಾರಂಭವಾಗಿದೆಯೆಂದು ವೇದವು ಹೇಳಿದೆ. ಶಿಲ್ಪ ಎಂಬ ಪದವು "ಶೀಲ ಸಮುದೌ" ಎಂಬ ಧಾತುವಿನಿಂದ ಉತ್ಪನ್ನವಾಗಿದೆ. ಸಮಾಧಿ ಎಂಬ ಅರ್ಥವುಳ್ಳ 'ಶೀಲ್' ಎಂಬ ಧಾತುವು ತಪಸ್ಸನ್ನು ಸೂಚಿಸುತ್ತದೆ.

ಮನಸ್ಸು ಸಮಾಧಿ ಸ್ಥಿತಿಯಲ್ಲಿದ್ದಾಗ ರೂಪಿತವಾಗುವ ಕರಕುಶಲ ವಸ್ತುವೇ ಶಿಲ್ಪ ಎಂದೂ ಹೇಳಿರುವುದು ಶಿಲ್ಪ ಶಬ್ದದ ವ್ಯಾಪಕ ಅರ್ಥ ವಿಸ್ತಾರವನ್ನು ಈ ಹಂತದಲ್ಲಿ ಕಾಣಬಹುದು.[೩೧]

ಭಾರತೀಯ ವಾಸ್ತು, ಮೂರ್ತಿಶಿಲ್ಪ, ಚಿತ್ರಕಲೆಗಳಿಗೆ ಸಂಬಂಧಿಸಿದ ಅಧ್ಯಯನವನ್ನು ಶಿಲ್ಪಶಾಸ್ತ್ರವೆಂದು ಗುರುತಿಸಲಾಗುತ್ತದೆ. ಕೆಲವೊಮ್ಮೆ ಶಿಲ್ಪಶಾಸ್ತ್ರವೆಂದಲ್ಲಿ ಮೂರ್ತಿ ಅಥವಾ ಪ್ರತಿಮಾ ರಚನೆ ಅವುಗಳ ಲಕ್ಷಣವನ್ನು ವಿವರಿಸಲಾಗುತ್ತದೆ. ಮೂರ್ತಿ ಎಂಬ ಪದವು ಆ ಪದಕ್ಕೆ ಪರ್ಯಾಯವಾಗಿ ಬಳಸಿದ ಪದಗಳಾದ ಪ್ರತಿಮಾ, ಬಿಂಬ, ಪ್ರತಿಕೃತಿ, ವಿಗ್ರಹ ಮುಂತಾದ ಶಬ್ದಗಳು. ಅದೊಂದು ಭೌತಿಕ ವಸ್ತು ಎಂಬಂತೆ ಅರ್ಥ ಕೊಡುತ್ತದೆ.[೩೨] ಈ ರೀತಿಯ ಮೂರ್ತಿ ಶಿಲ್ಪವನ್ನು ಕುರಿತು ಶಾಸ್ತ್ರೀಯ ಅಧ್ಯಯನ ಮಾಡುವುದಕ್ಕೆ ಮೂರ್ತಿ ಶಾಸ್ತ್ರ ಅಥವಾ ಪ್ರತಿಮಾ ಶಾಸ್ತ್ರವೆಂದು ಕರೆಯಲಾಗುತ್ತದೆ. ಮೂರ್ತಿ ಶಿಲ್ಪವನ್ನುದ್ದೇಶಿಸಿ ಶಾಸ್ತ್ರೀಯವಾಗಿ ಹೇಳುವ ಶಾಸ್ತ್ರ ಗ್ರಂಥಗಳನ್ನು ಕಾಣಬಹುದು. ಅವುಗಳಲ್ಲಿ ಕಾಶ್ಯಪಶಿಲ್ಪ, ಮಾನಸಾರ, ಸಮರಾಂಗಣ, ಸೂತ್ರಧಾರ, ಶಿಲ್ಪರತ್ನಂ, ಮಯಮತಂ, ವಿಶ್ವಕರ್ಮ ವಾಸ್ತುಶಾಸ್ತ್ರ, ಸಕಲಾಧಿಕಾರ, ಕಾಶ್ಯಪ ಸಂಹಿತೆ, ದೇವತಾ ಮೂರ್ತಿ ಲಕ್ಷಣ, ಪ್ರಸಾದ ಮಂಡನ, ರಾಜವಲ್ಲಭದಂತಹ ಇಪ್ಪತ್ತು ಗ್ರಂಥಗಳು ಅತೀ ಪ್ರಮುಖವಾಗಿವೆ.[೩೩]

ಮೂರ್ತಿ ಶಿಲ್ಪದ ಕಲ್ಪನೆಗಳು ಭಾರತದಲ್ಲಿ ಸಿಂಧೂ ನಾಗರೀಕತೆಯಿಂದ ಕಂಡು ಬರುತ್ತವೆ. ಪ್ರಾರಂಭದಲ್ಲಿ ರಚನೆಯಾಗಿರುವ ಗೂಳಿ, ಲಿಂಗ, ಪಶುಪತಿ, ಶಿವ, ನೃತ್ಯ ಮಾಡುವ ಸ್ತ್ರೀ ಮುಂತಾದ ಶಿಲ್ಪಗಳು ಇಂದಿಗೂ ಅಧ್ಯಯನಗಳ ಚರ್ಚೆಯಲ್ಲಿ ಸ್ಥಾನವನ್ನು ಪಡೆದಿವೆ. ಇವು ನಂತರದ ಭಾರತೀಯ ಮೂರ್ತಿ ಶಿಲ್ಪಗಳ ಬೆಳವಣಿಗೆಗೆ ಪ್ರೇರಕವಾದವು. ಇನ್ನೂ ವೇದಗಳ ಕಾಲದಲ್ಲಿ ವಿಗ್ರಹಗಳಿಗೆ ಪ್ರಾಧಾನ್ಯವಿರಲಿಲ್ಲವೆಂದೂ ಪ್ರಕೃತಿ ಶಕ್ತಿಗಳನ್ನು ಉಪಾಸಿಸಲಾಗುತ್ತಿತ್ತೆಂದೂ ಹೇಳುವುದುಂಟು. ಇದರಲ್ಲಿ ನಿಜಾಂಶವಿದ್ದರೂ ವಿಗ್ರಹಗಳಿಗೆ ಸ್ಥಾನವಿಲ್ಲದೇ ಇರಲಿಲ್ಲ. ಇಂದ್ರ, ವರುಣ, ರುದ್ರ ಮೊದಲಾದ ದೇವತೆಗಳಿಗೆ ಮನುಷ್ಯಾಕಾರದ ಕಲ್ಪನೆಯನ್ನು ಕೊಟ್ಟಿರುವುದು ಅಲ್ಲಿ ಕಾಣುತ್ತದೆ.[೩೪] ಚಾರಿತ್ರಿಕ ಯುಗಕ್ಕೆ ಬಂದರೆ ಅತ್ಯಂತ ಪ್ರಾಚೀನವಾದ ಶಿಲ್ಪಾಕೃತಿಗಳು ಮೌರ್ಯರ ಕಾಲದವು. ಕಲ್ಲಿನ ಸ್ತಂಭಗಳ ಮೇಲೆ ವೃಷಭ, ಆನೆ, ಸಿಂಹ, ಕುದುರೆ ಮೊದಲಾದ ಆಕೃತಿಗಳು ಪ್ರಮುಖವಾದವು. ಮೌರ್ಯರ ಶಕ್ತಿ ಇಳಿಮುಖವಾಗುತ್ತಿದ್ದಂತೆಯೇ ಶುಂಗರು, ಕುಶಾನರು, ಕಳಿಂಗರು, ಶಿಲ್ಪಕಲೆಗೆ ಆಶ್ರಯ ಕೊಟ್ಟರು. ಗುಪ್ತರ ಕಾಲವಂತೂ ಶಿಲ್ಪ, ಸಾಹಿತ್ಯ, ವಿಜ್ಞಾನ ಎಲ್ಲವುಗಳ ದೃಷ್ಟಿಯಿಂದಲೂ ಸುವರ್ಣಯುಗವೆನ್ನಬಹುದು.[೩೫]

ಕರ್ನಾಟಕ ಚಾರಿತ್ರಿಕ ಕಾಲದಲ್ಲಿ ಮೂರ್ತಿಶಿಲ್ಪದ ಬೆಳವಣಿಗೆಯನ್ನು ಗುರುತಿಸುವಾಗ ಶಾತವಾಹನರು, ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು ಮತ್ತು ವಿಜಯನಗರದ ಅರಸರು ಮೂರ್ತಿ ಶಿಲ್ಪದ ಬೆಳವಣಿಗೆಗೆ ವಿಶೇಷ ಪ್ರೋತ್ಸಾಹ ನೀಡಿದರು.

ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಪ್ರಾಚೀನ ದೇವಾಲಯಗಳಲ್ಲಿ ವಿವಿಧ ಕಾಲಘಟ್ಟಗಳಲ್ಲಿ ನಿರ್ಮಿಸಲಾದ ಮೂರ್ತಿಶಿಲ್ಪಗಳನ್ನು ಅಧ್ಯಯನ ಮಾಡಲಾಗಿದೆ. ಈಗಾಗಲೇ ಅಧ್ಯಯನ ಮಾಡಿದಂತೆ ಅರಸೀಕೆರೆ ಪರಿಸರದಲ್ಲಿ ಬಹುಮುಖ್ಯವಾಗಿ ಹೊಯ್ಸಳರ ಕಾಲದ ವಿಪುಲ ಪ್ರಮಾಣದ ದೇವಾಲಯಗಳು ನಿರ್ಮಾಣಗೊಂಡಿವೆ. ಹಾಗೆ ವಿಜಯನಗರ ಮತ್ತು ಪಾಳೆಯಗಾರರ ಕಾಲದಲ್ಲೂ ಹಲವಾರು ದೇವಾಲಯಗಳು ನಿರ್ಮಾಣವಾಗಿವೆ. ಆಯಾ ರಾಜವಂಶಗಳ ಕಾಲದಲ್ಲಿ ನಿರ್ಮಾಣಗೊಂಡ ವಾಸ್ತುಶೈಲಿಯ ದೇವಾಲಯಗಳಲ್ಲಿ ಅವರದೇ ಆದ ಮೂರ್ತಿ ಶಿಲ್ಪಗಳು ಬೆಳೆದು ಬಂದಿವೆ. ಹೊಯ್ಸಳ ಶೈಲಿಯ ಬಹುತೇಕ ದೇವಾಲಯಗಳನ್ನು ಅರಸೀಕೆರೆ ಪರಿಸರದಲ್ಲಿ ಕಾಣಬಹುದಾಗಿದೆ. ಹೊಯ್ಸಳ ಕಾಲದ ಮೂರ್ತಿಶಿಲ್ಪಗಳಲ್ಲಿ ಬಹುಮುಖ್ಯವಾಗಿ ಇಲ್ಲಿನ ದೇವಾಲಯಗಳಲ್ಲಿ ಕಪ್ಪು ನೀಲಿ ಮಿಶ್ರಿತ ಬಳಪದ ಕಲ್ಲು, ಹಸಿರು ಮಿಶ್ರಿತ ಬಳಪದ ಕಲ್ಲುಗಳನ್ನು ಬಳಸಿ ವಿವಿಧ ಮೂರ್ತಿ ಶಿಲ್ಪಗಳನ್ನು ಕಡೆಯಲಾಗಿದೆ. ಈ ಕಲ್ಲು ಸೂಕ್ಷ್ಮ ಶೈಲಿಯ ಕೆತ್ತನೆಗಳಿಗೆ ಅನುಕೂಲವಾದುದರಿಂದ ಅವುಗಳನ್ನು ಮೂರ್ತಿಗಳ ನಿರ್ಮಾಣಕ್ಕೆ ಬಳಸಿಕೊಂಡರು. ಆದ್ದರಿಂದಲೇ ಹೊಯ್ಸಳ ಕಾಲದ ಮೂರ್ತಿ ಶಿಲ್ಪಗಳು ರಚನೆಯು ಜಗತ್ ಪ್ರಸಿದ್ಧಿಯನ್ನು ಪಡೆದಿರುವುದನ್ನು ಕಾಣಬಹುದು. ದೈಹಿಕವಾಗಿ ಮೈ ತುಂಬಿಕೊಂಡಿರುವ ಈ ಮೂರ್ತಿಗಳು ದೇಹದ ಮೇಲೆ ವಿವಿಧ ಆಭರಣಗಳ ಅಲಂಕಾರವನ್ನು ತುಂಬಾ ಸೂಕ್ಷ್ಮವಾಗಿ ಮಾಡಿರುವುದನ್ನು ಕಾಣಬಹುದು. ಹುಲ್ಲೇಕೆರೆಯ ಕೇಶವ ದೇವಾಲಯದ ಹೊರಭಿತ್ತಿಯಲ್ಲಿ ಹಾರನಹಳ್ಳಿಯ ಸೋಮೇಶ್ವರ ದೇವಾಲಯದ ನವರಂಗದಲ್ಲಿ ಸರಸ್ವತಿ, ಗಣೇಶ, ಲಕ್ಷ್ಮಿ, ಕೇಶವ ಇವುಗಳು ಹೊಯ್ಸಳ ಮೂರ್ತಿ ಶಿಲ್ಪಗಳು ಕಲಾಕೃತಿಗಳಾಗಿವೆ. ರಾಮೇಶ್ವರ ದೇವಾಲಯದಲ್ಲಿ ಕಾರ್ತಿಕೇಯ, ಗಣೇಶ, ವೀರಭದ್ರ, ಭೈರವ ವಿಗ್ರಹಗಳು ಹೊಯ್ಸಳ ಶೈಲಿಯಲ್ಲಿವೆ.

ವಿಜಯನಗರ ಕಾಲದಲ್ಲಿ ಅವರ ಶೈಲಿಯ ದೇವಾಲಯಗಳಿದ್ದು ಅವುಗಳಲ್ಲಿ ಹಲವು ಮೂರ್ತಿ ಶಿಲ್ಪಗಳು ವಿಜಯನಗರ ಶೈಲಿಯಲ್ಲಿವೆ. ಬಲ್ಲಾಳೇಶ್ವರ ದೇವಾಲಯದ ಮಹಿಷಮರ್ದಿನಿ, ನಂದಿ ವಿಗ್ರಹಗಳು ವಿಜಯನಗರ ಶೈಲಿಯಲ್ಲಿವೆ.ನಂತರದ ಪಾಳೆಯಗಾರರ ಕಾಲದಲ್ಲಿ ಚಿಕ್ಕ ಪುಟ್ಟ ದೇವಾಲಯಗಳು ನಿರ್ಮಾಣಗೊಂಡಿದ್ದು ಅವುಗಳಲ್ಲಿ ಆಂಜನೇಯ ಶಿಲ್ಪಗಳು ಹೆಚ್ಚು.

## ೪.೫.೧ ಶೈವ ಮೂರ್ತಿ ಶಿಲ್ಪಗಳು

### ನಂದಿ ಶಿಲ್ಪಗಳು

ಅರಸೀಕೆರೆ ಕಸಬ ಹೋಬಳಿ ವ್ಯಾಪ್ತಿಯಲ್ಲಿ ಸರಳ ಕೆತ್ತನೆ ಮತ್ತು ಹೆಚ್ಚು ಅಲಂಕೃತವಾಗಿ ಕೆತ್ತಲ್ಪಟ್ಟಿರುವ ನಂದಿಯ ಶಿಲ್ಪಗಳು ಕಂಡು ಬರುತ್ತವೆ. ನಂದಿ ಶಿವನ ವಾಹನ ಪುರಾಣಗಳಲ್ಲಿಯೂ ಶಿವನ ವಾಹನವಾದ ನಂದಿಯ ಪ್ರಸ್ತಾಪ ಕಂಡು ಬರುತ್ತದೆ. ಪ್ರಸ್ತುತ ಅಧ್ಯಯನ ಪರಿಸರದಲ್ಲಿ ನಂದಿ ಶಿಲ್ಪಗಳು ಶಿವ ದೇವಾಲಯದ ಅಂತರಾಳ ಅಥವಾ ನವರಂಗದಲ್ಲಿ ಕಂಡುಬರುತ್ತವೆ. ಈ ಶಿಲ್ಪಗಳನ್ನು ಬೆಣಚು ಕಲ್ಲಿನಲ್ಲಿ ಕೆತ್ತಲ್ಪಟ್ಟಿವೆ. ನಂದಿಯನ್ನು ವೃಷಭ, ಬಸವಣ್ಣ ಎಂದೂ ಕೂಡ ಕರೆಯುತ್ತಾರೆ. ಶಂಭು ಲಿಂಗೇಶ್ವರ ದೇವಾಲಯದಲ್ಲಿ ಜೋಡಿ ನಂದಿ ವಿಗ್ರಹಗಳಿವೆ. ಕೊರಳಿಗೆ ಗಂಟೆಸರ, ಕಾಲುಗಳಿಗೆ ಗೆಜ್ಜೆ ಹಾಕಿರುತ್ತಾರೆ.

### ಗಣೇಶ ವಿಗ್ರಹಗಳು

ಮೂಷಿಕವನ್ನು (ಇಲಿ) ವಾಹನವನ್ನಾಗಿ ಹೊಂದಿರುವ ಗಣೇಶ, ಪಾರ್ವತಿ ಮತ್ತು ಪರಮೇಶ್ವರರ ಪುತ್ರ. ಪುರಾಣ, ಆಗಮ, ಬ್ರಾಹ್ಮಣ ಸೂತ್ರ, ಧರ್ಮ ಶಾಸ್ತ್ರಗಳಲ್ಲಿ ಗಣೇಶನ ಉಲ್ಲೇಖವಿದೆ. ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಕಂಡು ಬರುವ ಗಣೇಶ ಶಿಲ್ಪಗಳು ಹೆಚ್ಚು ಸ್ಥಾನಿಕ ಶಿಲ್ಪಗಳಾಗಿದ್ದು ಸಮಭಂಗಿಯಲ್ಲಿವೆ.

ಗಣೇಶ ವಿಗ್ರಹಗಳಲ್ಲಿ ಸಾಮಾನ್ಯವಾಗಿ ಚತುರ್ಭಾಹುಗಳಿದ್ದು, ಕುಳಿತ ಭಂಗಿಯಲ್ಲಿರುವ ಮೂರ್ತಿಗಳೇ ಹೆಚ್ಚು ಕಂಡು ಬರುತ್ತವೆ. ವಿವಿಧ ಅಲಂಕರಣಗಳಿಂದ ಕೂಡಿದ ಗಣೇಶನು ಸರಿ ಸುಮಾರು ೩ ಅಡಿ ಎತ್ತರವುಳ್ಳವುಗಳಾಗಿದ್ದು, ಅಗಲವಾದ ಕಿವಿ, ಇಳಿಬಿದ್ದ ಎದೆ. ಡೊಳ್ಳು ಹೊಟ್ಟೆ ಹೊಂದಿದ್ದು ಸುಖಾಸೀನ ಭಂಗಿಯಲ್ಲಿ ಕುಳಿತಿದ್ದು ಕಾಲ್ಗಡಗ, ಕಂಠೀಹಾರ, ತಲೆಗೆ ಕರಂಡ ಮುಕುಟವನ್ನು ಧರಿಸಿರುವನು. ಕೈಕಂಕಣ, ಉದರದಲ್ಲಿ ನಾಗಬಂಧವನ್ನು ಧರಿಸಿದೆ. ಸೊಂಡಲಿನ ವಿನ್ಯಾಸ ಬಲಗಡೆ ಬಾಗಿದೆ. ಗಿಡ್ಡಾಕೃತಿಯ ಸ್ಥೂಲಕಾಯ, ದಪ್ಪ ತೋಳುಗಳು ಹೀಗೆ ಆಕರ್ಷಕವಾದ ಮೈಕಟ್ಟನ್ನು ಕಡೆದು ಉತ್ತಮ ಶಿಲ್ಪಾಕೃತಿಗಳಾಗಿ ಕಂಡು ಬರುತ್ತವೆ. ತನ್ನ ಕೈಯಲ್ಲಿ ಅಂಕುಶಪಾಶ, ಮೋದಕ, ಕಳಶ ಲೇಖನಿಯನ್ನು ಹಿಡಿದಿರುವುದು. ಈ ರೀತಿಯ ಗಣೇಶನ ವಿಗ್ರಹಗಳು ಅರಸೀಕೆರೆ ಪರಿಸರದ ಶಿವಾಲಯ, ಸೋಮೇಶ್ವರ, ರಾಮೇಶ್ವರ ದೇವಾಲಯಗಳಲ್ಲಿ ಕಂಡುಬರುತ್ತವೆ.

### ವೀರಭದ್ರ ಶಿಲ್ಪ

ವೀರಭದ್ರ ವಿಗ್ರಹವು ಸುಮಾರು ೨.೫ ಅಡಿಯಷ್ಟು ಎತ್ತರವಾಗಿದ್ದು ತನ್ನ ನಾಲ್ಕು ಕೈಗಳಲ್ಲಿ ಖಡ್ಗ, ಗುರಾಣಿ, ಖೇಟ, ಬಿಲ್ಲು ಬಾಣ ಹಿಡಿದಿರುವನು. ಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವನು. ವೀರಗಾಸೆಯನ್ನು ತೊಟ್ಟು ಕಿರೀಟಮುಕುಟ, ಕರ್ಣ ಕುಂಡಲ, ಭುಜವಲ್ಯ, ಕಾಲಿಗೆ ದಪ್ಪನೆಯ ಕಡಗ ಧರಿಸಿರುವನು. ಪ್ರಭಾವಳಿಯು ಹೂಬಳ್ಳಿಗಳ ಅಲಂಕಾರದಿಂದ ಕೂಡಿದೆ. ಶಿಲ್ಪದ ಕೆಳಗೆ ದಕ್ಷಬ್ರಹ್ಮನಿರುವನು.

**ಭೈರವ ಶಿಲ್ಪಗಳು**

ರಾಮೇಶ್ವರ ದೇವಾಲಯದ ನಗ್ನ ಭೈರವನ ಶಿಲ್ಪವು ಮೂರು ಅಡಿ ಎತ್ತರವಾಗಿದೆ. ಚತುರ್ಭುಜಗಳನ್ನೊಳಗೊಂಡಿರುವ ಭೈರವ ತನ್ನ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ರುಂಡವನ್ನು ಹಿಡಿದಿರುವನು. ರುಂಡದಿಂದ ಬೀಳುತ್ತಿರುವ ರಕ್ತವನ್ನು ನಾಯಿಯು ನೆಕ್ಕುತ್ತಿದೆ. ಶಿಲ್ಪವು ಕಿರೀಟ ಮುಕುಟ ಧಾರಿಯಾಗಿದ್ದು ಕಟಿ ಬಂಧ, ಕೆಯೂರ, ತೋಳ್ಬಂದಿ ಕಾಲ್ಗಡಗ, ಹಾರ, ರುಂಡಮಾಲೆ ಧರಿಸಿರುವರು. ಕೀರ್ತಿ ಮುಖವು ಅಲಂಕೃತವಾಗಿದೆ.

**ಷಣ್ಮುಖ ಶಿಲ್ಪ**

ಷಣ್ಮುಖನು ತನ್ನ ವಾಹನವಾದ ಮಯೂರನ ಮೇಲೆ ಕುಳಿತಿರುವನು. ಈ ಶಿಲ್ಪವು ಸುಮಾರು ೨.೫ ಅಡಿ ಎತ್ತರವಾಗಿದ್ದು ಆರು ಮುಖಗಳನ್ನು ಹೊಂದಿದೆ. ಮುಂಭಾಗಕ್ಕೆ ಮೂರು ಮುಖಗಳಿದ್ದು ಕಿರೀಟಧಾರಿಯಾಗಿದ್ದಾನೆ. ತನ್ನ ನಾಲ್ಕು ಕೈಗಳಲ್ಲಿ ಭರ್ಜಿ, ವಜ್ರಾಯುಧ, ಅಕ್ಷಮಾಲ, ಫಲ ಹಿಡಿದಿರುವನು ಕರ್ಣ ಕುಂಡಲ, ಕಂಠಿಹಾರ, ಕೆಯೂರ, ಭುಜವಲ್ಯ, ಕಾಲ್ಕಡಗ, ಗೆಜ್ಜೆಯ ಸರವನ್ನು ಧರಿಸಿದ್ದಾನೆ.

**೪.೫.೨ ವೈಷ್ಣವ ಮೂರ್ತಿ ಶಿಲ್ಪಗಳು**

ವೈಷ್ಣವ ಪುರಾಣಗಳಲ್ಲಿ ವಿಷ್ಣುವಿನ ದಶಾವತಾರ ವರ್ಣನೆಗಳಿವೆ. ಅವತಾರ ಪುರುಷ, ಕಥೆ, ಪುರಾಣ ಶಿಲ್ಪಗಳಲ್ಲಿ ಮತ್ಸ್ಯ ಕೂರ್ಮ, ನರಸಿಂಹ, ವರಹ, ವಾಮನ, ಪರಶುರಾಮ, ರಘುರಾಮ, ಕೃಷ್ಣ, ಬುದ್ಧ ಮತ್ತು ಶುಲ್ಕ್ಯ ಎಂಬ ೧೦ ಅವತಾರಗಳ ಪ್ರಸ್ತಾಪ ಇದೆ. ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಕಂಡು ಬರುವ ಶಿಲ್ಪಗಳನ್ನು ಕೆಳಕಂಡಂತೆ ಗಮನಿಸಬಹುದು.

**ಆಂಜನೇಯ ಶಿಲ್ಪಗಳು**

ವೈಷ್ಣವ ಶಿಲ್ಪಗಳಲ್ಲಿ ಆಂಜನೇಯ ಶಿಲ್ಪಗಳು ತಮ್ಮದೇ ಆ ವೈಶಿಷ್ಟತೆಯನ್ನು ಉಳಿಸಿಕೊಂಡು ಬಂದಿವೆ. ಗಂಡಸಿಯ ಕೆರೆಯ ಪಕ್ಕದಲ್ಲಿ ವೀರಾಂಜನೇಯನ ಶಿಲ್ಪವು ಸುಮಾರು ಐದು ಅಡಿ ಎತ್ತರವಾಗಿದೆ. ಅಭಯ ಹಸ್ತವನ್ನು ಮೇಲಕ್ಕೆ ಎತ್ತಿರುವಂತೆ, ಎಡಗೈಯನ್ನು ಸೊಂಟದ ಮೇಲೆ ಇಟ್ಟಿದ್ದಾನೆ. ದ್ವಿಭಂಗಿಯಲ್ಲಿ ನಿಂತಿದ್ದು ಕರ್ಣ ಕುಂಡಲ, ರುದ್ರಾಕ್ಷಿ ಮಾಲೆ, ಕಂಠಿಹಾರ, ಭುಜವಲ್ಯ, ಕಾಲುಗಳಿಗೆ ದಪ್ಪನೆಯ ಕಡಗ ಧರಿಸಿರುವನು. ವಿಗ್ರಹದ ಸುತ್ತಲೂ ಹೂ ಬಳ್ಳಿಗಳಿಂದ ಅಲಂಕರಿಸಿದ್ದು ಹಿಂಭಾಗದಲ್ಲಿ ಒತ್ತಾಳೆಯ ಪ್ರಭಾವಳಿ ಇದೆ.

**ವೇಣುಗೋಪಾಲ ಶಿಲ್ಪಗಳು**

ವೇಣುಗೋಪಾಲನ ವಿಗ್ರಹವು ಗರ್ಭಗೃಹದಲ್ಲಿದೆ. ಈ ಶಿಲ್ಪವು ಪದ್ಮ ಪೀಠದ ಮೇಲೆ ೪ ಅಡಿ ಎತ್ತರವಾಗಿದ್ದು ತ್ರಿಭಂಗಿಯಲ್ಲಿ ನಿಂತು ಕೊಳಲನ್ನು ನುಡಿಸುತ್ತಿದ್ದಾನೆ. ಅರೆ ಮುಚ್ಚಿನ ಕಣ್ಣುಗಳು ಗಾನದಲ್ಲಿ

ತನ್ಮಯವಾಗಿರುವುದನ್ನು ಕಾಣಬಹುದು. ತನ್ನ ಎರಡು ಕೈಗಳಿಂದ ವೇಣುವನ್ನು ಹಿಡಿದಿರುವ ವೇಣುಗೋಪಾಲನು ಕಿರೀಟ ಮುಕುಟಧಾರಿಯಾಗಿದ್ದು ಕರ್ಣ ಕುಂಡಲ, ತೋಳ್ಬಂದಿ, ಹಾರ, ಮಣಿಸರ ಸೊಂಟಪಟ್ಟಿ ಧರಿಸಿರುವನು.

**ಉಗ್ರ ನರಸಿಂಹನ ಉಬ್ಬು ಶಿಲ್ಪ**

ವೇಣುಗೋಪಾಲನ ದೇವಾಲಯದ ನವರಂಗದ ಗೋಡೆಯಲ್ಲಿ ಈ ಶಿಲ್ಪವಿದೆ. ಹಿರಣ್ಯ ಕಶ್ಯಪುವನ್ನು ಸಂಹಾರ ಮಾಡುತ್ತಿರುವ ಉಗ್ರನರಸಿಂಹನು ತನ್ನ ತೊಡೆಯ ಮೇಲೆ ಹಿರಣ್ಯ ಕಶ್ಯಪನನ್ನು ಮಲಗಿಸಿಕೊಂಡು ಅವನ ಹೊಟ್ಟೆಯನ್ನು ಬಗೆದು ಕರಳುಗಳನ್ನು ಮಾಲೆಯನ್ನಾಗಿ ಮಾಡಿಕೊಂಡು ಧರಿಸಿರುವುದನ್ನು ಈ ಶಿಲ್ಪದಲ್ಲಿ ಕಾಣಬಹುದು. ಉಳಿದಂತೆ ಆಭರಣಗಳು ಗೋಚರವಾಗುತ್ತಿಲ್ಲ.

**೪.೫.೩ ಶಾಕ್ತ ಪಂಥಿಯ ಶಿಲ್ಪಗಳು**

ಮಾತೃ ದೇವತೆಯ ರೂಪದಲ್ಲಿರುವ ಶಕ್ತಿದೇವತೆಯ ಆರಾಧಿಸುವುದಕ್ಕೆ ಶಾಕ್ತ ಪಂಥ ಎಂದು ಕರೆಯುತ್ತಾರೆ. ಭಾರತದಲ್ಲಿ ಶಾಕ್ತಪಂಥ ಚರಿತ್ರೆಯನ್ನು ಸಿಂಧೂ ಸಂಸ್ಕೃತಿಯಿಂದ ಗುರುತಿಸಿದ್ದೇವೆ. ವೈದಿಕ ಕಾಲದ ನಂತರ ಶಕ್ತಿ ದೇವತೆ ಬೆಳವಣಿಗೆ ಪ್ರಮುಖವಾಗಿ ಕಂಡು ಬರುತ್ತದೆ. ಶಾಕ್ತರ ಆರಾಧ್ಯ ದೇವತೆಯನ್ನು ಶಾಕ್ತ ದೇವತೆ, ಆದಿಶಕ್ತಿ, ಚೌಡೇಶ್ವರಿ, ದುರ್ಗಮ್ಮ, ಯಲ್ಲಮ್ಮ, ಮಾರಮ್ಮ ಮುಂತಾದ ಹೆಸರುಗಳಿಂದ ಕರೆಯುತ್ತಾರೆ.

**ಮಹಿಷ ಮರ್ದಿನಿ ಶಿಲ್ಪ**

ವಿಜಯನಗರ ಕಾಲದ ಶಿಲ್ಪವಿದು. ಕಿರೀಟಧಾರಿಯಾದ ಮಹಿಷಮರ್ದಿನಿಯು ತನ್ನ ಕೈಗಳಲ್ಲಿ ಕತ್ತಿ, ಬಿಲ್ಲು, ಬಾಣ, ಗುರಾಣಿ, ತ್ರಿಶೂಲಗಳನ್ನು ಹಿಡಿದಿರುವಳು. ಕರ್ಣ ಕುಂಡಲ, ಕಂಠಿಹಾರ, ತೋಳ್ಬಂದಿ, ಸೊಂಟಪಟ್ಟಿ, ಕಾಲುಂಗುರವನ್ನು ಧರಿಸಿದ್ದು ಹಿಂದೆ ಕೀರ್ತಿ ಮುಖವು ಅಲಂಕಾರಿಕವಾಗಿದೆ ಈ ವಿಗ್ರಹವನ್ನು ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ.

**ಕಟ್ಟಮ್ಮದೇವಿ**

ನಗರದ ಮಧ್ಯಭಾಗದಲ್ಲಿ ಈ ದೇವಾಲಯವಿದೆ. ಗರ್ಭಗೃಹದಲ್ಲಿ ಉದ್ಭವ ಕಲ್ಲು ಸುಮಾರು ಮೂರು ಅಡಿ ಎತ್ತರವಾಗಿದ್ದು ಈ ಹಿಂದೆ ಕಟ್ಟಮ್ಮದೇವಿಗೆ ನರ ಬಲಿ ಕೊಡುತ್ತಿದ್ದುದರಿಂದ ಕಟ್ಟೆಮಾರಮ್ಮ ಎಂದು ಕರೆಯುತ್ತಿದ್ದರು. ಈಗಲೂ ಸಹ ಅಲ್ಲಿ ಪ್ರಾಣಿಗಳ ಬಲಿ ಕೊಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಬೆಳ್ಳಿಯ ಮುಖಭಾವವನ್ನು ಧರಿಸಿದ್ದಾರೆ.

## ಕೊನೆಟಿಪ್ಪಣಿಗಳು

೧. ಗೋಪಾಲ್ ಆರ್. (ಸಂ), ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು. ೬೭೯–೮೦.

೨. ಅದೇ ಪು. ೬೮೧.

೩. ಎಪಿಗ್ರಾಫಿಯ ಕರ್ನಾಟಿಕ, ಸಂ.೧೦ (ಪರಿ) ಶಾಸನ ಸಂಖ್ಯೆ ೧, ಅರಸೀಕೆರೆ, ಪು.೩.

೪. ಗೊರೂರು ಅನಂತರಾಜು, ಹಾಸನ ಜಿಲ್ಲೆಯ ದೇವಾಲಯಗಳ ದರ್ಶನ, ಪು. ೧೪೮.

೫. ಎ.ಕ.ಸಂ. ೧೦, ಶಾ.ಸಂ. ೨೦೩, ಗಂಡಸಿ, ಪು. ೪೩.

೬. ಅದೇ ಶಾ.ಸಂ. ೧೬೧, ತಳಲೂರು, ಪು. ೨೦೯.

೭. ಅದೇ ಶಾ.ಸಂ. ೩೨೧, ಹಿರಿಯೂರು, ಪು. ೫೭.

೮. ಅದೇ ಶಾ.ಸಂ. ೩೧೭–೩೧೮, ಹಿರಿಯೂರು, ಪು. ೫೮.

೯. ಅದೇ ಶಾ.ಸಂ. ೫೫, ಬಾಣಾವರ, ಪು. ೭೬.

೧೦. ಎ.ಕ.ಸಂ. ೧೦, ಶಾ.ಸಂ. ೫೨, ಬೆಂಡೆಕೆರೆ, ಪು. ೭೦.

೧೧. ಗೊರೂರು ಅನಂತರಾಜು, ಪೂರ್ವೋಕ್ತ, ಪು. ೧೫೫.

೧೨. ಪುಟ್ಟಣ್ಣ ಕೆ.ವಿ., ಶ್ರೀಕಂಠಶಾಸ್ತ್ರೀ ಎಸ್. (ಸಂ.), ಹೊಯ್ಸಳ ವಾಸ್ತುಶಿಲ್ಪ, ಪು. ೧೫೬–೫೭.

೧೩. ಅದೇ ಪು. ೧೫೪.

೧೪. ಎ.ಕ.ಸಂ. ೧೦, ಶಾ.ಸಂ. ೧೫೭, ಕಲ್ಲಂಗೆರೆ, ಪು. ೨೦೩.

೧೫. ಅದೇ ಶಾ.ಸಂ. ೧೩೪, ತಿರುಪತಿ, ಪು. ೧೭೨.

೧೬. ಅದೇ ಶಾ.ಸಂ. ೨೦೬, ಚಿಕ್ಕಗಂಡಸಿ, ಪು. ೨೫೭.

೧೭. ಅದೇ ಶಾ.ಸಂ. ೯೭, ಗಂಡಸಿ, ಪು. ೨೫೨.

೧೮. ಗೊರೂರು ಅನಂತರಾಜು, ಪೂರ್ವೋಕ್ತ, ಪು. ೧೪೯.

೧೯. ಎ.ಕ.ಸಂ. ೧೦, ಶಾ.ಸಂ. ೧೮೪, ಹುಲ್ಲೇಕೆರೆ, ಪು. ೨೩೯.

೨೦. ಗೊರೂರು ಅನಂತರಾಜು, ಪೂರ್ವೋಕ್ತ, ಪು. ೧೫೦.

೨೧. ಎ.ಕ.ಸಂ. ೧೦, ಶಾ.ಸಂ. ೧೫೮, ಕೆಲ್ಲಂಗೆರೆ, ಪು. ೨೦೪.

೨೨. ಅದೇ ಶಾ.ಸಂ. ೫೫, ಚಿಕ್ಕಗಂಡಸಿ, ಪು. ೭೬.

೨೩. ಅದೇ ಶಾ.ಸಂ. ೫೩, ಬೆಂಡೆಕೆರೆ, ಪು. ೭೫.

೨೪. ಅದೇ ಶಾ.ಸಂ. ೫೨, ಬೆಂಡೆಕೆರೆ, ಪು. ೭೦.

೨೫. ಅದೇ ಶಾ.ಸಂ. ೩೧೫, ಚಿಕ್ಕಗಂಡಸಿ, ಪು. ೩೭೦.

೨೬. ಗೊರೂರು ಅನಂತರಾಜು, ಪೂರ್ವೋಕ್ತ, ಪು. ೧೫೫.

೨೭. ಗೋಪಾಲ್ ಆರ್. (ಸಂ), ಪೂರ್ವೋಕ್ತ, ಪು. ೩೪೯.

೨೮. ಎ.ಕ.ಸಂ. ೧೦, ಶಾ.ಸಂ. ೩೧, ಅರಸೀಕೆರೆ, ಪು. ೩೬.

೨೯. ನಾಗರಾಜಪ್ಪ ಎನ್., ಚಿತ್ರದುರ್ಗ ಪರಿಸರದ ದೇವಾಲಯಗಳು (ಅಪ್ರಕಟಿತ ಸಂಪ್ರಬಂಧ), ಪು. ೮೦.

೩೦. ತಿಪ್ಪೇರುದ್ರಸ್ವಾಮಿ ಹೆಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು. ೫೨೩.

೩೧. ಮಹಂತೇಶ ಎನ್.ಎಸ್., ಹೊಸದುರ್ಗ ಪರಿಸರದ ದೇವಾಲಯಗಳು (ಅಪ್ರಕಟಿತ ಸಂಪ್ರಬಂಧ), ಪು. ೮೯.

೩೨. ದತ್ತಾತ್ರೇಯ ಜಿ. ಕುಲಕರ್ಣಿ, ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು (ಅಪ್ರಕಟಿತ ಮಹಾಪ್ರಬಂಧ), ಪು. ೨೩೬.

೩೩. ಕುರಗುಂದ ಟಿ. ಪಂಕಜಾಕ್ಷ, ಶಿಲ್ಪ ಸೌಂದರ್ಯ, ಪು. ೩.

೩೪. ತಿಪ್ಪೇರುದ್ರಸ್ವಾಮಿ ಹೆಚ್., ಪೂರ್ವೋಕ್ತ, ಪು. ೬೨೫.

೩೫. ಅದೇ ಪು. ೬೨೬.

# ಅಧ್ಯಾಯ–೫

# ಸಮಾರೋಪ

ದೇವಾಲಯಗಳು ಪ್ರಾಚೀನ ಕಾಲದ ಮಾನವನ ಚರಿತ್ರೆ ಮತ್ತು ಸಂಸ್ಕೃತಿಯನ್ನು ರಚಿಸಲು ಸಹಾಯಕವಾಗಬಲ್ಲ ಬಹುಮುಖ್ಯ ಪುರಾತತ್ವ ಆಕರ ಸಂಪತ್ತು. ದೇವಾಲಯಗಳ ವಾಸ್ತುಶಿಲ್ಪ, ಮೂರ್ತಿಶಿಲ್ಪ ಮತ್ತು ಧಾರ್ಮಿಕ ಮತ ಪಂಥಗಳ ಕುರಿತು ಅಧ್ಯಯನ ಮಾಡುವುದರಿಂದ ಅಂದಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ಪ್ರತಿಬಿಂಬಿಸುವಲ್ಲಿ ಸಹಕಾರಿಯಾಗಿವೆ. ದೇವಾಲಯಗಳು ಮಾನವನ ಧಾರ್ಮಿಕ ಶ್ರದ್ಧೆ, ಭಕ್ತಿ, ನಂಬಿಕೆಗಳ ಪ್ರತೀಕಗಳಾಗಿ ಬೆಳೆದುಬಂದಿವೆ. ನಿಸರ್ಗದಲ್ಲಿ ಎಲ್ಲಕ್ಕಿಂತ ಮಿಗಿಲಾಗಿ ಒಂದು ಅದ್ಭುತವಾದ ಶಕ್ತಿ ಇದೆ ಎಂದು ಅರಿತ ಮಾನವನು ಅದನ್ನೇ ದೇವರೆಂದು ಪೂಜಿಸಲು ಪ್ರಾರಂಭಿಸಿದ ಮೂರ್ತ ರೂಪ ನೀಡಿ ಪೂಜಿಸಲು ಪ್ರಾರಂಭಿಸಿದ ಬಳಿಕ ಅದರ ರಕ್ಷಣೆಗಾಗಿ ಭೂಮಿಯ ಮೇಲೆ ಒಂದು ವಾಸ್ತುರೂಪ ನೀಡಿದೆ ಇದನ್ನೇ ದೇಗುಲವಾಸ್ತು ಎಂದು ಕರೆಯಲಾಯಿತು. ಚರಿತ್ರೆಯ ರಚನೆಯಲ್ಲಿ ಸ್ಮಾರಕಗಳು ಬಹಳ ಮಹತ್ವವನ್ನು ಪಡೆದಿದ್ದು ಅವುಗಳಲ್ಲಿ ದೇವಾಲಯಗಳು ರಾಜ ಪ್ರಭುತ್ವದ ಸಂಕೇತವಾಗಿ ಹಾಗೂ ಜನರ ಪ್ರೀತಿ, ವಿಶ್ವಾಸ, ಮನ್ನಣೆ ಗಳಿಸಲು ಧಾರ್ಮಿಕ ವ್ಯವಸ್ಥೆಯ ಹಿನ್ನೆಲೆಯಲ್ಲಿ ಬೃಹತ್ ಪ್ರಮಾಣದ ದೇವಾಲಯಗಳ ನಿರ್ಮಾಣಕ್ಕೆ ಕಾರಣಕರ್ತರಾದರು. ಅರಸುಮನೆತನಗಳಿಂದ ಸಾಮಂತ ಮತ್ತು ಅಧಿಕಾರಿಗಳವರೆಗೂ ದೇವಾಲಯಗಳನ್ನು ಅಭೂತಪೂರ್ವವಾಗಿ ನಿರ್ಮಿಸಿರುವುದನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ಪ್ರಾಚೀನ ಕಾಲದಲ್ಲಿ ಅದರಲ್ಲೂ ಗುಪ್ತರ ಕಾಲದಲ್ಲಿ ಕಲ್ಲಿನಿಂದ ದೇವಾಲಯಗಳನ್ನು ನಿರ್ಮಾಣ ಮಾಡುವ ಕಲೆ ಬೆಳೆದು ಬಂದಿದೆ.

ಕರ್ನಾಟಕದಲ್ಲಿ ದೇವಾಲಯ ಸಂಸ್ಕೃತಿಯತ್ತ ಗಮನ ಹರಿಸಿದಾಗ ಮೌರ್ಯರು, ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ಹಾಗೂ ಪಾಳೆಯಗಾರರು ಹೀಗೆ ಪ್ರಬಲ ಮತ್ತು ಸಾಮಂತ ರಾಜಮನೆತನಗಳು ಧಾರ್ಮಿಕ ವ್ಯವಸ್ಥೆ ಮತ್ತು ದೇವಾಲಯ ಸಂಸ್ಕೃತಿಗೆ ಮಹತ್ವ ನೀಡಿರುವುದು ಅವರ ಕಾಲದ ಸ್ಮಾರಕಗಳು ಸಾಕ್ಷಿಯಾಗಿವೆ. ಪ್ರಸ್ತುತ ಅಧ್ಯಯನ “ಅರಸೀಕೆರೆ ಪರಿಸರದ ದೇವಾಲಯಗಳು” ಎಂಬುದಾಗಿದ್ದು ಈ ಪರಿಸರದ ಪ್ರಾಚೀನ ದೇವಾಲಯಗಳನ್ನು ಕುರಿತು ಅಧ್ಯಯನಿಸಲಾಗಿದೆ. ಈ ಭಾಗದಲ್ಲಿ ಗಂಗರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ಮತ್ತು ಪಾಳೆಯಗಾರರು ಆಳಿರುವುದನ್ನು ಕಾಣಬಹುದು. ಆದ್ದರಿಂದ ಇಲ್ಲಿನ ದೇವಾಲಯಗಳ ಅಧ್ಯಯನದಲ್ಲಿ ಆಯಾ ರಾಜ ಸಂತತಿಗಳ ಹಲವು ಪ್ರಭಾವವನ್ನು ಕಾಣಬಹುದು. ಪ್ರಸ್ತುತ ಅಧ್ಯಯನದ ಕ್ಷೇತ್ರದಲ್ಲಿ ಹೊಯ್ಸಳರು ಮತ್ತು ಪಾಳೆಯಗಾರರ ಕಾಲದ ದೇವಾಲಯಗಳು ಹೆಚ್ಚು ಪ್ರಮಾಣದಲ್ಲಿ ಬೆಳಕಿಗೆ ಬಂದಿವೆ.

ಈ ದೇವಾಲಯಗಳ ಕುರಿತು ಪ್ರೌಢ ಪ್ರಬಂಧದಲ್ಲಿ ಒಟ್ಟು ಮುವತ್ತೈದು ದೇವಾಲಯಗಳನ್ನು ಅಧ್ಯಯನ ಮಾಡಲಾಗಿದೆ. ಈ ದೇವಾಲಯಗಳನ್ನು ಆಯಾಧರ್ಮದ ಪಂಥಗಳ ಆಧಾರದ ಮೇಲೆ ಶೈವ ದೇವಾಲಯ, ವೈಷ್ಣವ ದೇವಾಲಯ, ಜೈನ ದೇವಾಲಯ ಮತ್ತು ಶಾಕ್ತ ದೇವಾಲಯಗಳೆಂದು ವರ್ಗೀಕರಿಸಿಕೊಂಡು ಅಧ್ಯಯನ ಮಾಡಿದಾಗ ಇವುಗಳಲ್ಲಿ ಶೈವ ದೇವಾಲಯಗಳು ಅಧಿಕವಾಗಿದ್ದು, ಸಾಂಸ್ಕೃತಿಕ ಮತ್ತು ಭಾವನಾತ್ಮಕವಾಗಿ ಈ ಪರಿಸರದಲ್ಲಿ ಶೈವಾರಾಧನೆ ಬೆಸೆದುಕೊಂಡಿರುವುದು ಇದರಿಂದ ಸ್ಪಷ್ಟವಾಗುತ್ತದೆ. ಇಲ್ಲಿನ ಪ್ರಾಚೀನ ಶೈವ ದೇವಾಲಯಗಳಲ್ಲಿ ಶಿವಲಿಂಗಗಳು ಹೊಯ್ಸಳರ ಕಾಲದವು. ಅರಸೀಕೆರೆಯ ಬಲ್ಲಾಳೇಶ್ವರ, ರಾಮೇಶ್ವರ, ಕುಂಜೇಶ್ವರ, ಸಿದ್ದೇಶ್ವರ ದೇವಾಲಯಗಳು ಇದಕ್ಕೆ ಅತ್ಯುತ್ತಮ ಉದಾಹರಣೆಗಳು.

ಪ್ರಾಚೀನ ಅವಧಿಯಲ್ಲಿ ಜೈನಧರ್ಮ ಅಸ್ತಿತ್ವದಲ್ಲಿತ್ತು. ಆದರೆ ಬಹುಕಾಲ ನೆಲೆಯೂರಲಿಲ್ಲ. ಇದರ ಪತನಾ ತರುವಾಯ ಶೈವಧರ್ಮ ನೆಲೆಯೂರಿತು. ೧೨ನೇ ಶತಮಾನದ ನಂತರ ವೀರಶೈವ ಧರ್ಮ ಪ್ರಬಲಗೊಂಡಿತು. ಸಕಲ ಧರ್ಮ ಪಂಥಗಳ ಪೋಷಕರಾಗಿದ್ದ ಹೊಯ್ಸಳರು ತಮ್ಮ ಆಳ್ವಿಕೆಯ ಕಾಲದಲ್ಲಿ ವೈಷ್ಣವ ಪಂಥಗಳಿಗೂ ಪ್ರಾಧಾನ್ಯತೆ ನೀಡಿದ್ದರು ಎಂಬುದಕ್ಕೆ ಅವರ ಕಾಲದಲ್ಲಿ ಕರ್ನಾಟಕದ ಬಹುಭಾಗಗಳಲ್ಲಿ ನಿರ್ಮಾಣಗೊಂಡಿರುವ ವೈಷ್ಣವ ದೇವಾಲಯಗಳು, ಮೂರ್ತಿ ಶಿಲ್ಪಗಳು ಸಾಕ್ಷಿಯಾಗಿವೆ. ಅದರಲ್ಲು ವಿಷ್ಣು ಹಾಗೂ ಚನ್ನಕೇಶವ ಮೂರ್ತಿ ಶಿಲ್ಪಗಳು ಬಹುತೇಕವಾಗಿ ದೇವಾಲಯಗಳಲ್ಲಿ ನಿರ್ಮಾಣಗೊಂಡವು. ಅದರಂತೆ ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಬಹುಪಾಲು ದೇವಾಲಯಗಳಲ್ಲಿ ಚನ್ನಕೇಶವ ಮೂರ್ತಿ ಶಿಲ್ಪಗಳನ್ನು ಕಾಣಬಹುದು. ಹೊಯ್ಸಳ ಕಾಲದ ಹಾರನಹಳ್ಳಿ ಚನ್ನಕೇಶವ ದೇವಾಲಯ ಪರಿಸರವು ಬಹುಮುಖ್ಯವಾಗಿ ವೈಷ್ಣವ ಪಂಥಗಳ ಪರಿಸರವಾಗಿತ್ತು ಎಂಬುದಕ್ಕೆ ಈ ದೇವಾಲಯ ಪರಿಸರದ ಹಲವು ವೈಷ್ಣವ ಮೂರ್ತಿ ಶಿಲ್ಪಗಳು ಹಾಗೂ ಈ ದೇವಾಲಯಕ್ಕೆ ಹೇರಳವಾಗಿ ನೀಡಿರುವ ದಾನ ದತ್ತಿಗಳು ಪುಷ್ಠಿ ನೀಡುತ್ತವೆ. ವಿಜಯನಗರ ಕಾಲದಲ್ಲಿ ಅಚ್ಯುತ್‌ರಾಯರ ಕಾಲದಲ್ಲಿ ಇವರ ಸಾಮಂತರು ಹೇರಳವಾಗಿ ದಾನ ದತ್ತಿಗಳನ್ನು ನೀಡಿರುವುದನ್ನು ದೇವಾಲಯ ಪರಿಸರದ ಶಾಸನಗಳಿಂದ ತಿಳಿದು ಬರುತ್ತದೆ.

ಒಟ್ಟಾರೆ ಅರಸೀಕೆರೆ ಪರಿಸರದಲ್ಲಿ ಶೈವಧರ್ಮವು ಬಹು ಆಚರಣೆಯಲ್ಲಿದ್ದು, ವೈಷ್ಣವ ಧರ್ಮವೂ ಹೊಯ್ಸಳರ ಪ್ರೋತ್ಸಾಹದಿಂದ ಬೆಳೆದು ಈ ಪಂಥಗಳು ವಿಜಯನಗರ ಅರಸರ ಮತ್ತು ಪಾಳೆಯಗಾರರ ಕಾಲದಲ್ಲಿ ಪೋಷಿಸಲ್ಪಟ್ಟವು. ಈ ಪರಿಸರದಲ್ಲಿ ಹೆಚ್ಚಾಗಿ ಹೊಯ್ಸಳರ ಕಾಲದ ದೇವಾಲಯಗಳು ಕಂಡುಬರುತ್ತವೆ.

ಮೂರ್ತಿ ಶಿಲ್ಪಗಳು ದೇವಾಲಯದ ಅವಿಭಾಜ್ಯ ಅಂಗಗಳಾಗಿದ್ದು, ಜನರ ನಂಬಿಕೆಯ ಪ್ರತೀಕಗಳಾಗಿದ್ದವು. ಮೂರ್ತಿ ಶಿಲ್ಪಗಳ ಅಧ್ಯಯನದಿಂದ ಹೊಯ್ಸಳ, ವಿಜಯನಗರ ಹಾಗೂ ಪಾಳೇಯಗಾರರ ಕಾಲದ ಮೂರ್ತಿ ಶಿಲ್ಪಗಳನ್ನು ಬೆಳಕಿಗೆ ತರಲು ಸಾಧ್ಯವಾಗಿದೆ. ಹೊಯ್ಸಳ ಮೂರ್ತಿ

ಶಿಲ್ಪಗಳನ್ನು ಹಸಿರು ಬಣ್ಣದ ಬಳಪದ ಕಲ್ಲಿನಿಂದ ಕಂಡರಿಸಿದ ಮೂರ್ತಿ ಶಿಲ್ಪಗಳನ್ನು ಹೆಚ್ಚಾಗಿ ಕಾಣಬಹುದು. ಅವುಗಳಲ್ಲಿ ಬಹುಮುಖ್ಯವಾಗಿ ಚನ್ನಕೇಶವ ದೇವಾಲಯದ ಲಕ್ಷ್ಮೀನರಸಿಂಹ ಮಹಿಷಿ ಮರ್ದಿನಿ, ಉಗ್ರನರಸಿಂಹ, ಗಣೇಶ, ಕೇಶವ, ಸೋಮೇಶ್ವರ ದೇವಾಲಯದ ವೀರಭದ್ರ, ಗಣೇಶ, ಭೈರವ, ಸರಸ್ವತಿ, ಲಕ್ಷ್ಮೀ ಮೂರ್ತಿ ಶಿಲ್ಪಗಳನ್ನು ಕಾಣಬಹುದು. ಈ ಪರಿಸರದಲ್ಲಿ ನಾಲ್ಕು ಭೈರವ ಮೂರ್ತಿ ಶಿಲ್ಪಗಳು ಬೆಳಕಿಗೆ ಬಂದಿವೆ. ಅವು ಹೊಯ್ಸಳ ಹಾಗೂ ವಿಜಯನಗರ ಕಾಲದವುಗಳಾಗಿವೆ. ಹೆಚ್ಚು ಭೈರವ ಶಿಲ್ಪಗಳು ಕಂಡು ಬಂದಿರುವುದರಿಂದ ಪ್ರಾಚೀನ ಕಾಲದ ನಾಥ ಪಂಥದ ಕುರುಹುಗಳನ್ನು ಗುರುತಿಸಬಹುದು. ಈ ಸಂಗತಿಯು ಸಹ ಪ್ರಸ್ತುತ ಸಂಶೋಧನೆಯ ಒಂದು ಬಹುಮುಖ್ಯ ಅಂಶವಾಗಿದೆ. ಇನ್ನು ದೇವಾಲಯಗಳಿಗೆ ಸಂಬಂಧಿಸಿದಂತೆ ಶಾಸನಗಳ ಅಧ್ಯಯನದಿಂದ ಈ ದೇವಾಲಯಗಳಿಗೆ ಯಾವ ಯಾವ ರಾಜ ವಂಶಗಳ ಕಾಲದಲ್ಲಿ ದಾನ ದತ್ತಿಗಳನ್ನು ನೀಡಲಾಗಿತ್ತು ಮತ್ತು ಯಾವ ಕಾಲದಲ್ಲಿ ದೇವಾಲಯ ನಿರ್ಮಾಣವಾಗಿವೆ ಎಂಬುದನ್ನು ತಿಳಿಯಬಹುದು.

ಒಟ್ಟಾರೆ "ಅರಸೀಕೆರೆ ಪರಿಸರದ ದೇವಾಲಯಗಳು" ಎಂಬ ಈ ಅಧ್ಯಯನದ ಮೂಲಕ ಅರಸೀಕೆರೆ ಪರಿಸರದ ಪ್ರಾಚೀನ ದೇವಾಲಯಗಳು ಹಾಗೂ ಮೂರ್ತಿ ಶಿಲ್ಪಗಳನ್ನು ಬೆಳಕಿಗೆ ತರಲಾಗಿದೆ. ಅಜ್ಞಾತವಾಗಿದ್ದ ಈ ದೇವಾಲಯಗಳು ಇದೇ ಮೊದಲ ಬಾರಿಗೆ ವ್ಯವಸ್ಥಿತವಾದ ಅಧ್ಯಯನಕ್ಕೆ ಒಳಪಟ್ಟು ಚರ್ಚಿಸಲ್ಪಟ್ಟಿವೆ. ಶಾಸನಗಳ ಮೂಲಕ ಈ ದೇವಾಲಯಗಳಿಗೆ ಸಂಬಂಧಿಸಿದ ಹಲವು ಸಂಗತಿಗಳನ್ನು ಹೊರ ತರಲು ಸಾಧ್ಯವಾಗಿದೆ.

# ಅನುಬಂಧಗಳು

ಗ್ರಂಥಋಣ

ಪಾರಿಭಾಷಿಕ ಪದಗಳು

ನಕ್ಷೆಗಳು

ತಲ ನಕ್ಷೆಗಳು

ಛಾಯಾಚಿತ್ರಗಳು

# ಗ್ರಂಥಋಣ

ಅಪರ್ಣ ಕೂ.ಸ., **"ದೇವಾಲಯ ವಾಸ್ತುಶಿಲ್ಪ ಪರಿಚಯ"**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

ಅಂಬಳಿಕೆ ಹಿರಿಯಣ್ಣ (ಸಂ), **"ಕನ್ನಡ ವಿಷಯ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ"**, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೯.

ಆಸೂರಿ ಶ್ರೀನಿವಾಸಯ್ಯಂಗಾರ್ ಮತ್ತು ತಿರುಪತಿ ಶ್ರೀನಿವಾಸಯ್ಯಂಗಾರ್,**"ಭರತಖಂಡದ ದೇವಾಲಯ"**, ೧೯೯೮.

ಕಲಬುರ್ಗಿ ಎಂ.ಎಂ., **"ಕರ್ನಾಟಕದ ಕೈಫಿಯತ್ತುಗಳು"**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪.

ಚಿದಾನಂದಮೂರ್ತಿ ಎಂ., **"ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ"**, ಸಪ್ನಬುಕ್‌ಹೌಸ್, ಬೆಂಗಳೂರು, ೧೯೬೬.

ಗುರುರತ್ನಬಾಬು .ಡಿ., **"ದಕ್ಷಿಣ ಭಾರತೀಯ ಕಲೆ ಮತ್ತು ವಾಸ್ತುಶಿಲ್ಪ"**, ಮಾನಸಗಂಗೋತ್ರಿ, ಮೈಸೂರು, ೧೯೯೧.

ಗೋಪಾಲ ಬಾ.ರ., **"ಕರ್ನಾಟಕದ ಮೂರ್ತಿಶಿಲ್ಪ ಅವಲೋಕನ"**, ಬೆಂಗಳೂರು, ೧೯೮೫.

ಗೊರೂರಗ ಅನಂತರಾಜ್, **"ಹಾಸನ ಜಿಲ್ಲೆಯ ದೇವಾಲಯ ದರ್ಶನ"**, ಪದ್ಮಶೇಖರ ಪ್ರಿಂಟರ್ಸ್, ಮೈಸೂರು, ೨೦೦೯.

ಗೋಪಾಲ್ ಆರ್. (ಸಂ), **"ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ"**, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೧೦.

ಗುರುರಾಜ್‌ರಾವ್ ಎ.ಕೆ., **"ಕರ್ನಾಟಕದ ವಾಸ್ತುಶಿಲ್ಪಗಳು"**, ಕರ್ನಾಟಕ ಇತಿಹಾಸ ಅಕಾಡೆಮಿ, ಮೈಸೂರು, ೧೯೯೪.

ಜ್ಞಾನಾನಂದ ಜಿ., **"ಶಿಲ್ಪಾದರ್ಶನ ಸಂಪುಟ-೧"**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ಜ್ಞಾನಾನಂದ ಜಿ., **"ಶಿಲ್ಪಾದರ್ಶನ ಸಂಪುಟ-೨"**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

ತಿಪ್ಪೇಸ್ವಾಮಿ, **ಶಿಲ್ಪಕಲಾ ಪ್ರಪಂಚ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೪.

ದೇವರಕೊಂಡಾರೆಡ್ಡಿ, **"ಗಂಗರ ದೇವಾಲಯಕ್ಕೆ ಒಂದು ಅಧ್ಯಯನ",** ಕನ್ನಡ ಸಾಹತ್ಯ ಪರಿಷತ್ತು, ಬೆಂಗಳೂರು, ೧೯೯೬.

ದೇವರಕೊಂಡಾರೆಡ್ಡಿ. **"ಭಾರತೀಯ ವಾಸ್ತು ವಿದ್ಯಾ"** **ರೆಡ್ಡಿ ಪ್ರಕಾಶನ ಬೆಂಗಳೂರು, ೧೯೯೪.**

ನಂದಿಮಠ ಎಸ್.ವಿ., **"ಕರ್ನಾಟಕದ ಧರ್ಮಗಳು",** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೩.

ಪ್ರಭಾಕರ್ ಎಂ.ಎಸ್., **"ದೇವಾಲಯ ವಾಸ್ತುಚಂದ್ರಿಕೆ",** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಪ್ರಭಾಕರ್ ಎಂ.ಎಸ್., **"ದೇವಾಲಯ ವಾಸ್ತು",** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

ಪುಟ್ಟಸ್ವಾಮಿ ಬಿ.ಎಸ್., **"ಕೈಫಿಯತ್ತು ಕಂಡ ಮೈಸೂರು ರಾಜಕೀಯ ಚರಿತ್ರೆ",** ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು, ೨೦೦೭.

ಪಾಟೀಲ ಎಸ್.ಸಿ., **"ಕರ್ನಾಟಕದ ಕೋಟೆಗಳು",** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

ಮಹದೇವ .ಸಿ., **"ಕರ್ನಾಟಕದ ಪುರಾತತ್ವ ಶೋಧ",** ಶ್ರೀಲಕ್ಷ್ಮಿ ಪ್ರಕಾಶನ, ಹೊಸಪೇಟೆ, ೨೦೦೧.

ಮಹಂತೇಶ್ ಎನ್.ಎಸ್., **"ಚಿತ್ರದುರ್ಗ ಕೋಟೆ ಪರಿಸರದ ದೇವಾಲಯಗಳು",** ರೇಣುಕಾ ಪ್ರಕಾಶನ, ಚಿತ್ರದುರ್ಗ, ೨೦೦೮.

ಮೂರ್ತಿ ಕೆ.ಎಲ್.ಎನ್., **"ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ",** ರಂಜಿತ ಪ್ರಕಾಶನ, ಬೆಂಗಳೂರು, ೧೯೯೮.

ರಾಜಶೇಖರ್ ಎಸ್., **"ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ",** ಸುಜಾತ ಪ್ರಕಾಶನ, ಧಾರವಾಡ, ೧೯೮೮.

ರಾಮಚಂದ್ರರಾವ್ ಎಸ್.ಕೆ., **"ಮೂರ್ತಿಶಿಲ್ಪ : ನೆಲೆ ಹಿನ್ನೆಲೆ",** ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫.

ರಘೋತ್ತಮ ತೀರ್ಥ, **"ಪ್ರವಾಸಿ ಕರ್ನಾಟಕ ದರ್ಶನ"**, ಭಾರತೀಬಾಯಿ ಪ್ರಕಾಶನ, ಬೆಂಗಳೂರು, ೨೦೦೯.

ರಮೇಶ್ ಕೆ.ವಿ., **"ಕರ್ನಾಟಕ ಶಾಸನ ಸಮೀಕ್ಷೆ"**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೧.

ರಾಮಚಂದ್ರರಾವ್ ಎಸ್.ಕೆ., **"ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ, ಸಂಪುಟ-೪"**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೮.

ಆರ್.ಟಿ.ಜಿ., **"ಕರ್ನಾಟಕದ ಪುಣ್ಯಕ್ಷೇತ್ರಗಳು"**, ಸ್ವಪ್ನಬುಕ್‌ಹೌಸ್, ಬೆಂಗಳೂರು, ೨೦೦೯.

ಲಕ್ಷ್ಮಣ್ ತೆಲಗಾವಿ, **"ಮೌರ್ಯ ಮತ್ತು ಶಾತವಾಹನ ಯುಗ"**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

ವಸಂತಲಕ್ಷ್ಮಿ .ಕೆ., **"ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು"**, ಸುಮುಖ ಪ್ರಕಾಶನ, ಬೆಂಗಳೂರು, ೨೦೦೬.

ಶ್ರೀಕಂಠಶಾಸ್ತ್ರಿ ಎಸ್., **"ಹೊಯ್ಸಳ ವಾಸ್ತುಶಿಲ್ಪ"**, ಮೈಸೂರು, ೧೯೬೫.

ಶ್ರೀನಿವಾಸ ಪಾಡಿಗಾರ **"ಪುರಾತತ್ವಶಾಸ್ತ್ರ ಪರಿಚಯ"** ರಾಮಾಶ್ರಯ ಪಬ್ಲಿಕೇಶನ್ ಧಾರವಾಡ, ೧೯೯೭.

ಶಿವತಾರಕ ಕೆ.ಟಿ., **"ಕರ್ನಾಟಕದ ಪುರಾತತ್ವ ನೆಲೆಗಳು"**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ಸುಂದರ .ಅ., **"ಕರ್ನಾಟಕ ಚರಿತ್ರೆ ಸಂಪುಟ-೧"**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

ಸುಂದರ .ಅ., **"ದೇವಾಲಯ ಮೂರ್ತಿಶಿಲ್ಪಗಳು ಒಂದು ವಿಶ್ಲೇಷಣೆ"**, ದಯಾನಂದ ಪೈ ಇತಿಹಾಸ ಸಂಶೋಧನಾ ಕೇಂದ್ರ, ಮೈಸೂರು.

ಸುರೇಶ್ ಕೆ.ಎಂ., ವಾಸುದೇವ ಬಡಿಗೇರ, ಸೋಮಶೇಖರ್ ಎಸ್.ವೈ. ಮತ್ತು ಮೂಡಲಗೇರಿ ಕೊಟ್ರೇಶ್, **"ಕರ್ನಾಟಕ ದೇವಾಲಯ ಕೋಶ, ಕೊಪ್ಪಳ ಜಿಲ್ಲೆ"**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ಸೇಸುನಾಥ್ ಐ., **"ಕರ್ನಾಟಕದ ಪ್ರವಾಸಿ ತಾಣಗಳು" (ಭಾಗ-೧)**, ಸಾಧನಾ ಪ್ರಕಾಶನ, ಬೆಂಗಳೂರು, ೨೦೦೬.

ಸೂರ್ಯನಾಥ ಕಾಮತ್, ಕೃಷ್ಣಮೂರ್ತಿ ಪಿ.ಎ., (ಸಂ), **"ಇತಿಹಾಸ ದರ್ಶನ"**, ಸಂಪುಟ ೧ ರಿಂದ ೨೭, ಇತಿಹಾಸ ಅಕಾಡೆಮಿ, ಬೆಂಗಳೂರು. ೨೦೧೨.

**ಅಪ್ರಕಟಿತ ಸಂಶೋಧನಾ ಪ್ರಬಂಧಗಳು**

ಲಲಿತಾಂಬ ಎನ್.ಆರ್., **"ಅರಸೀಕೆರೆ ತಾಲ್ಲೂಕಿನ ಶಾಸನಗಳ ಅಧ್ಯಯನ"** (ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

ನಾಗರಾಜಪ್ಪ ಎನ್., "ಚಿತ್ರದುರ್ಗ ಪರಿಸರದ ದೇವಾಲಯಗಳು", ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

ತಿಪ್ಪೇಸ್ವಾಮಿ ಎನ್., **"ರಕ್ಷಣಾ ವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

# ಪಾರಿಭಾಷಿಕ ಪದಗಳು

ಅಧಿಷ್ಠಾನ – ದೇವಾಲಯ ಗೋಡೆಗೆ ಆಧಾರವಾಗಿರುವ ತಳಪಾಯ.

ಅರೆಗಂಬ – ಗೋಡೆಗಳ ನಡುವಣ ಅರ್ಧ ಕಂಬ, ಕಂಬದ ಅರ್ಧಭಾಗ ಗೋಡೆಯಲ್ಲಿ ಸೇರಿದ್ದು ಉಳಿದ ಭಾಗ ಮಾತ್ರ ಗೋಚರಿಸುತ್ತದೆ.

ಅಕ್ಷ ಮಾಲ – ಮಣಿಗಳ ಸರ (ಜಪಮಾಲೆ)

ಅಂಕಣ – ವಿಂಗಡಣೆಯ ಒಂದು ಭಾಗ

ಅಂಕುಶ – ಆಯುಧಗಳಲ್ಲಿನ ಒಂದು ಭಾಗ

ಅಂಜಲಿ ಮುದ್ರೆ – ಎರಡು ಕೈ ಜೋಡಿಸಿ ಮುಗಿಯುತ್ತಿರುವುದು

ಅಭಯ ಹಸ್ತ – ಸಂರಕ್ಷಣಾ ಸೂಚಿ ಹಸ್ತ

ಈಟಿ – ಭರ್ಜಿ

ಉದರ ಬಂಧ – ಮೂರ್ತಿ ಎದೆಯ ಭಾಗದಲ್ಲಿ ಧರಿಸುವ ಆಭರಣ

ಉಪಪೀಠ – ದೇವಾಲಯದ ಅಧಿಷ್ಠಾನದಲ್ಲಿನ ಒಂದು ಭಾಗ

ಊರ್ಧ್ವಮುಖಕ್ರಮ – ದೇವಾಲಯದ ಹೊರಭಾಗದಲ್ಲಿ ಕೆಳಗಿನಿಂದ ಮೇಲಕ್ಕೆ ಒಂದಾದ ಮೇಲೊಂದು ಭಾಗವಸ್ತು ನಿಶ್ಚಿತ ರೀತಿಯಲ್ಲಿ ರಚಿಸುವುದು.

ಕಟಾಂಜನ – ಕುಳಿತುಕೊಳ್ಳಲು ಅನುವಾಗುವ ಕಟ್ಟೆ

ಕರಂಡ ಮುಕುಟ – ಭರಣಿಯಾಕಾರದ ಕಿರೀಟ

ಕಯೂರ – ತೋಳಬಂದಿ

ಕಟ್ಯಾವಲಂಬಿತ – ಈಟಿ (ಸೊಂಟ) ಹಿಡಿದಿರುವ ಕೈ

ಕಕ್ಷಾಸನ – ಕುಳಿತುಕೊಳ್ಳಲು ನಿರ್ಮಿಸಿದ ಕಟ್ಟೆ

ಕಿರೀಟ ಮುಕುಟ – ತಲೆಯ ಮೇಲೆ ಕಿರೀಟ ಧರಿಸಿದ ಮೂರ್ತಿ

ಕೀರ್ತಿ ಮುಖ – ಅಲಂಕಾರದ ಒಂದು ವಿಧ. ವೈಭವ, ಭವ್ಯತೆಯನ್ನು ಸೂಚಿಸುವುದು.

ಕುಂಭಲತಾ – ಭಿತ್ತಿಯಲ್ಲಿ ಕುಡ್ಯಸ್ತಂಭಗಳ ನಡುವಿನ ಅಲಂಕಾರಿಕ ಭಾಗ.

ಕುಮುದ – ಅದಿಷ್ಠಾನದಲ್ಲಿ ಕಾಣಬರುವ ಅಂಗ

ಕೋಷ್ಠಗುಡಿ – ಮೂರ್ತಿಗಳನ್ನು ಇಡಲು ಮಾಡಿದ ಚಿಕ್ಕಗುಡಿ

ಖಡ್ಗ – ಕತ್ತಿ

ಗರ್ಭಗೃಹ – ಮೂಲದೇವತಾಮೂರ್ತಿ ಇರುವ ದೇವಾಲಯದ ಭಾಗ

ಗವಾಕ್ಷಿ – ಗೋವಿಂದನ ಕಣ್ಣನ್ನು ಹೋಲುವ ಕಿಟಕಿ

ಗೃಹಪಿಂಡ – ಗರ್ಭಗೃಹದ ಸುತ್ತ ಇರುವ ಭಿತ್ತಿ

ಜಟಾಮುಕುಟ – ಮೂರ್ತಿಗಳ ಕೂದಲನ್ನೇ ಕಿರೀಟದಂತೆ ಅಲಂಕರಿಸುವುದು (ಜಡೆಮುಡಿ)

ದ್ವಾರ ಪಾಲಕರು – ಬಾಗಿಲನ್ನು ಕಾಯುವ ಸೇವಕರು

ಧನಸ್ಸು – ಬಿಲ್ಲು

ನಾಗಬಂಧ – ನಾಗರ ಹಾವುಗಳು ಒಂದಕ್ಕೊಂದು ಸುತ್ತಿಕೊಂಡಿರುವುದು

ನಾಭಿ – ಹೊಕ್ಕಳು

ಪದ್ಮ – ಕಮಲ

ಪದ್ಮಾಸನ – ಪದ್ಮದ ಮೇಲೆ ಕುಳಿತಿರುವ /ಎರಡು ಕಾಲನ್ನು ಮಡಚಿ ಕುಳಿತಿರುವುದು.

ಪದ್ಮ ಪೀಠ – ಕಮಲದಿಂದ ಅಲಂಕರಿಸುವ ಪೀಠ

ಪರಶು – ಯುದ್ಧ ಕೊಡಲಿ

ಪರಿವಾರ – ಮುಖ್ಯ ದೇವತೆಯರ ಉಪದೇವತೆಗಳು

ಪುಷ್ಪಬೋದಿಗೆ – ಪದ್ಮಾಲಂಕೃತವುಳ್ಳ ಬೋದಿಗೆ

ಪ್ರದಕ್ಷಿಣಾ ಪಥ – ಗರ್ಭಗುಡಿಯನ್ನು ಸುತ್ತಿಬರಲು ಇರುವ ದಾರಿ

ಪ್ರಣಾಳಿ – ಅಭಿಷೇಕ ಮಾಡಿದ ನೀರು ಹೊರ ಹೋಗಲು ಮಾಡಿರುವ ನಾಳ

ಪ್ರಭಾವಳಿ – ಮೂರ್ತಿಗಳ ಬೆನ್ನ ಹಿಂದೆ ಮಾಡಿರುವ ಸುತ್ತಲಿನ ಅಲಂಕಾರಿಕ ಪಟ್ಟಿ

ಪಂಜರ – ಗೂಡು (ಕೂಟ, ಶಾಲಾಗಳ ಮಧ್ಯಭಾಗ)

ಬಸದಿ – ಜೈನ ದೇವಾಲಯಗಳು

ಭಿತ್ತಿ – ಗೋಡೆ

ಭುಜಬಂಧ – ಮೂರ್ತಿ ಭುಜಕ್ಕೆ ಧರಿಸಿದ ಆಭರಣ

ಮಕರ ತೋರಣ – ಮೊಸಳೆ ಬಾಯಿಂದ ತೋರಣಗಳು ಹೊರ ಬಂದ ಹಾಗೆ ಮಾಡಿರುವ ಅಲಂಕಾರ

ಮಹಾದ್ವಾರ – ಮುಖ್ಯ ಪ್ರವೇಶ ದ್ವಾರ

ಯಜ್ಞೋಪವೀತ – ದೇಹದಲ್ಲಿ ಧರಿಸಿದ ಪವಿತ್ರ ದಾರ

ಯೋಗ ಮುದ್ರೆ – ಧ್ಯಾನದಲ್ಲಿ ಕುಳಿತ ಭಂಗಿ

ರುಂಡ ಮಾಲೆ – ತಲೆ ಬುರುಡೆಯ ಹಾರ

ರೂವಾರಿ – ಶಿಲ್ಪಿ

ಲಲಾಟ ಬಿಂಬ – ದ್ವಾರದ ಮಧ್ಯದಲ್ಲಿ ಧಾರ್ಮಿಕ ಪಂಥವನ್ನು ಸೂಚಿಸುವ ಪ್ರತಿಬಿಂಬಕ ಚಿತ್ರವಿರುವ ಅಲಂಕಾರಿಕ ಭಾಗ

ಲಲಿತಾಸನ – ಒಂದು ಕಾಲನ್ನು ಇಳಿಬಿಟ್ಟು ಮತ್ತೊಂದು ಕಾಲನ್ನು ಮಡಚಿ ಕುಳಿತಿರುವ ಭಂಗಿ

| | | |
|---|---|---|
| ವರದ ಹಸ್ತ | – | ಭಕ್ತರಿಗೆ ವರ ನೀಡುವ ಹಸ್ತ |
| ವಲ್ಲಿ ಬಂಧ | – | ಬಳ್ಳಿಗಳು ಒಂದಕ್ಕೊಂದು ವೃತ್ತಾಕಾರದಲ್ಲಿ ಹೆಣೆದುಕೊಂಡಂತಿರುವ ಕಿಟಕಿ |
| ಭೇದಿ | – | ಭಿತ್ತಿಯಲ್ಲಿ ಬರುವ ಮೊದಲ ಅಂಗ |
| ಯಾಳಿ | – | ಸಿಂಹ ಮುಖ, ಆನೆಯ ಕೋರೆ |
| ಸಪ್ತ ಮಾತೃಕೆಯರು | – | ಶ್ರೀ ಬ್ರಾಹ್ಮಣಿ, ಶ್ರೀ ಮಹೇಶ್ವರಿ, ಶ್ರೀ ಇಂದ್ರಾಣಿ, ಕೌಮಾರಿ ಶ್ರೀ ವೈಷ್ಣವಿ, ಶ್ರೀ ವರಾಹಿ, ಶ್ರೀ ಚಾಮುಂಡಿ. |
| ಸಮಭಂಗಿ | – | ಸಮಕೋನದಲ್ಲಿ ನಿಂತಿರುವನು |
| ಸೋಪಾನ | – | ಮೆಟ್ಟಿಲುಗಳು |

# ಹಾಸನ ಜಿಲ್ಲಾ ನಕ್ಷೆ



ಚಿಕ್ಕಮಂಗಳೂರು

ಅರಸೀಕೆರೆ

ತುಮಕೂರು

ಬೇಲೂರು

ಹಾಸನ

ಚನ್ನರಾಯಪಟ್ಟಣ

ಸಕಲೇಶಪುರ

ಆಲೂರು

ಹೊಳೇ
ನರಸೀಪುರ

ಅರಕಲಗೂಡು

ದಕ್ಷಿಣ ಕನ್ನಡ

ಮೈಸೂರು

# ಅರಸೀಕೆರೆ ತಾಲೂಕು


ಬಾಣವರ
ಬೆಂಡೆಕೆರೆ
ಅರಕೆರೆ
ತಿರುಪತಿ
ಚಿಕ್ಕೂರು
ಅರಸಿಕೆರೆ ತಾಲೂಕು
ಕೆಲ್ಲಂಗೆರೆ
ತಳಲೂರು
ಚಲ್ಲಾಪುರ
ಹಾರನಹಳ್ಳಿ
ಚಿಕ್ಕ ಗಂಡಸಿ
ಗಂಡಸಿ
ಹುಲ್ಲೆಕರೆ



ಅರಸೀಕೆರೆ ಈಶ್ವರ ದೇವಾಲಯ: ತಲವಿನ್ಯಾಸ

ಸೋಮೇಶ್ವರ ದೇವಾಲಯ, ಹಾರನಹಳ್ಳಿ.





ಕೇಶವ ದೇವಾಲಯ, ಹುಲ್ಲೇಕೆರೆ.

ತ್ರಿಕೂಟ ದೇವಾಲಯ ಲಕ್ಷ್ಮೀ-ನರಸಿಂಹ, ಅರಕೆರೆ.








ರಾಮೇಶ್ವರ ದೇವಾಲಯ, ಬೆಂಡೆಕೆರೆ.

ಸಹಸ್ರಕೂಟ ಬಸದಿ, ಅರಸಿಕೆರೆ.









ಕುಂಜೇಶ್ವರ ದೇವಾಲಯ, ಹಿರಿಯೂರು.

# ದೇವಾಲಯಗಳು



ಬಲ್ಲಾಳೇಶ್ವರ ದೇವಾಲಯ, ಅರಸಿಕೆರೆ



ಬಲ್ಲಾಳೇಶ್ವರ ದೇವಾಲಯದ ದ್ವಾರಬಂಧ



ಭುವನೇಶ್ವರಿ



ನವರಂಗದ ಕಂಬಗಳು



ಸೋಮೇಶ್ವರ ದೇವಾಲಯ, ಹಾರನಳ್ಳಿ



ಸೋಮೇಶ್ವರ ದೇವಾಲಯದ ಕಂಬಗಳು




ಸೋಮೇಶ್ವರ ದೇವಾಲಯದ ಮಹಾದ್ವಾರ




ಕೇಶವ ದೇವಾಲಯ, ಹಾರನಹಳ್ಳಿ




ಕೇಶವ ದೇವಾಲಯ, ಅರಕೆರೆ




ಕೇಶವ ದೇವಾಲಯ, ಗಂಡಸಿ



ಕೇಶವ ದೇವಾಲಯದ ಬಿತ್ತಿ



ಕೇಶವ ದೇವಾಲಯ, ಹುಲ್ಲೇಕೆರೆ



ಕೇಶವ ದೇವಾಲಯದ ಶಿಖರ



ಕೇಶವ ದೇವಾಲಯದ ಹೊಯ್ಸಳ ಶಿಲ್ಪ



ಸಹಸ್ರಕೂಟ ಬಸದಿ, ಅರಸೀಕೆರೆ



ಸಹಸ್ರಕೂಟ ಬಸದಿಯ ಕಂಬಗಳು



ಗಣೇಶ ಮೂರ್ತಿ ಶಿಲ್ಪ, ಹಾರನಹಳ್ಳಿ



ಭೈರವ ಮೂರ್ತಿ ಶಿಲ್ಪ, ಬೆಂಡೆಕೆರೆ




ಭೈರವ ಮೂರ್ತಿ ಶಿಲ್ಪ, ಗಂಡಸಿ




ಆಂಜನೇಯ ಮೂರ್ತಿಶಿಲ್ಪ, ಗಂಡಸಿ



ಮಹಿಷಮರ್ಧಿನಿ ಮೂರ್ತಿ ಶಿಲ್ಪ, ಅರಸೀಕೆರೆ



ಸಪ್ತಮಾತೃಕೆಯ ಮೂರ್ತಿ ಶಿಲ್ಪ, ಹಾರನಹಳ್ಳಿ

